

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕನ್ನಡ ಎಂ.ಫಿಲ್ ಪದವಿಯ ಭಾಗವಾಗಿ ಸಾದರಪಡಿಸಿದ ನಿಬಂಧ

# "ಹಳಗನ್ನಡಸಾಹಿತ್ಯ ಮತ್ತು ಎಲ್.ಬಸವರಾಜು"


ನಿಬಂಧಕಾರರು
ಚಂದ್ರಕಾಂತ್. ಕೆ.
ಕನ್ನಡ ಎಂ.ಫಿಲ್
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು

ಮಾರ್ಗದರ್ಶಕರು
ಡಾ|| ಪ್ರಧಾನ ಗುರುದತ್ತ
ನಿವೃತ್ತ ಪ್ರಾಧ್ಯಾಪಕರು
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ, ಮೈಸೂರು.






ಕನ್ನಡ ವಿಶ್ವವಿದ್ಯಾಲಯ, ಹಂಪಿ.

222



ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕನ್ನಡ ಎಂ.ಫಿಲ್ ಪದವಿಯ ಭಾಗವಾಗಿ ಸಾದರಪಡಿಸಿದ ನಿಬಂಧ

# "ಹಳಗನ್ನಡಸಾಹಿತ್ಯ ಮತ್ತು ಎಲ್.ಬಸವರಾಜು"


ನಿಬಂಧಕಾರರು

**ಚಂದ್ರಕಾಂತ್. ಕೆ.**

ಕನ್ನಡ ಎಂ.ಫಿಲ್

ಕನ್ನಡ ವಿಶ್ವವಿದ್ಯಾಲಯ, ಹಂಪಿ

ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು

ಮಾರ್ಗದರ್ಶಕರು

**ಡಾ॥ ಪ್ರಧಾನ ಗುರುದತ್ತ**

ನಿವೃತ್ತ ಪ್ರಾಧ್ಯಾಪಕರು

ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ

ಮಾನಸ ಗಂಗೋತ್ರಿ, ಮೈಸೂರು.



ಕನ್ನಡ ವಿಶ್ವವಿದ್ಯಾಲಯ, ಹಂಪಿ.

# ಮಾರ್ಗದರ್ಶಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಕನ್ನಡ ಎಂ.ಫಿಲ್ ಪದವಿಯ ವಿದ್ಯಾರ್ಥಿಯಾದ **ಚಂದ್ರಕಾಂತ್. ಕೆ.** ಅವರು ನನ್ನ ಮಾರ್ಗದರ್ಶನದಲ್ಲಿ **"ಹಳಗನ್ನಡಸಾಹಿತ್ಯ ಮತ್ತು ಎಲ್.ಬಸವರಾಜು"** ಎಂಬ ಶೀರ್ಷಿಕೆಯ ನಿಬಂಧವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾನಿಲಯಕ್ಕೆ, ಅಥವಾ ಬೇರೆ ಯಾವುದೇ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೋಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: ೪|೮|೦೭

ಸ್ಥಳ : ಮೈಸೂರು.

(ಸಹಿ) ಲೋಹಿತ ಗುರುದೇವ

**ಮಾರ್ಗದರ್ಶಕರು**
ನಿವೃತ್ತ ಪ್ರಾಧ್ಯಾಪಕರು
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು.

## ಅಭ್ಯರ್ಥಿಯ ಘೋಷಣಾ ಪತ್ರ

**ಡಾ|| ಪ್ರಧಾನಗುರುದತ್ತ** – ನಿವೃತ್ತ ಪ್ರಾಧ್ಯಾಪಕರು, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ, ಮೈಸೂರು. ಇವರ ಮಾರ್ಗದರ್ಶನದಲ್ಲಿ **"ಹಳಗನ್ನಡಸಾಹಿತ್ಯ ಮತ್ತು ಎಲ್.ಬಸವರಾಜು"** ಎಂಬ ವಿಷಯದ ಬಗ್ಗೆ ನಡೆಸಿದ ಅಧ್ಯಯನದ ಫಲವೇ ಈ ನಿಬಂಧ.

ಈ ನಿಬಂಧವನ್ನು ಈ ಹಿಂದೆ ಭಾಗಶಃವಾಗಲಿ, ಪೂರ್ಣವಾಗಿಯಾಗಲಿ ಈ ವಿಶ್ವವಿದ್ಯಾನಿಲಯಕ್ಕೆ ಅಥವಾ ಬೇರೆ ಯಾವುದೇ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೋಮಾ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ: ೩೧|೮|೦೭

ಸ್ಥಳ : ಮೈಸೂರು.

ಕೆ. [signature]
**ನಿಬಂಧಕಾರರು**
ಕನ್ನಡ ಎಂ.ಫಿಲ್
ಕನ್ನಡ ವಿಶ್ವವಿದ್ಯಾನಿಲಯ, ಹಂಪಿ
ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮಿಪುರಂ, ಮೈಸೂರು.

# ಹಳಗನ್ನಡಸಾಹಿತ್ಯ ಮತ್ತು ಎಲ್.ಬಸವರಾಜು

## ವಿಷಯಸೂಚಿ

# ಪ್ರವೇಶಿಕೆ

ಆಧುನಿಕ ಕನ್ನಡಸಾಹಿತ್ಯದ ಹಿರಿಯ ಸಂಶೋಧಕರಲ್ಲಿ ಡಾ.ಎಲ್.ಬಸವರಾಜು ಅವರು ಪ್ರಮುಖರಾದವರು. (ಸಮಕಾಲೀನ ಸಮಾಜದ ಶ್ರೇಷ್ಠವಿದ್ವಾಂಸರೂ,ಸೃಜನಶೀಲ ಲೇಖಕರೂ ಆದ ಎಲ್.ಬಸವರಾಜು ಅವರು ಗ್ರಂಥಸಂಪಾದನೆ, ಸಂಶೋಧನೆ ಹಾಗೂ ಅನುವಾದದಂತಹ ವಿದ್ವತ್ ಕ್ಷೇತ್ರಗಳನ್ನು ಆಯ್ಕೆಮಾಡಿಕೊಂಡು) ಸುಮಾರು ೫೦ ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ.ಕ್ರಿಯಾತ್ಮಕತೆ,ಸೃಜನಶೀಲತೆ ಹಾಗೂ ವೈಚಾರಿಕತೆಗಳ ಸಮನ್ವಯದ ಸಂಗಮವಾಗಿರುವ ಡಾ.ಎಲ್.ಬಸವರಾಜು ಅವರದು ಸದಾ ಜ್ಞಾನದಾಹದಿಂದ ಕೂಡಿರುವ ತಳಮಳದ ವ್ಯಕ್ತಿತ್ವ. ಪಂಡಿತಮುಖಿ ಸಾಹಿತ್ಯವನ್ನು ಪಾಮರರೆಡೆಗೆ ತರುವ ತುಡಿತ ಅವರದು.ಆಳವಾದ ವಿದ್ವತ್ತು,ಸಹನಶೀಲ ಪರಿಷ್ಕರಣೆ,ನೇರ ನಡೆನುಡಿಯ ನಿಷ್ಠುರತೆ ಅವರ ಜೀವನದ ಬಹುಮುಖಗಳು. ಪಂಪಪೂರ್ವಯುಗದಿಂದ ಹಿಡಿದು ಪ್ರಸ್ತುತ ಸಮಾಜದವರೆಗಿನ ವಸ್ತುಗಳು ಅವರ ಅಧ್ಯಯನದ ವ್ಯಾಪ್ತಿಗೆ ಒಳಪಟ್ಟಿವೆ.

ಕನ್ನಡದ ಶ್ರೇಷ್ಠ ವಿದ್ವಾಂಸರೂ, ಸೃಜನಶೀಲ ಲೇಖಕರೂ ಆದ ಪ್ರೊ. ಎಲ್. ಬಸವರಾಜು ಅವರು ಕನ್ನಡ ನಾಡಿನ ಶ್ರೇಷ್ಠ ಗ್ರಂಥಸಂಪಾದಕರೂ, ಸಂಶೋಧಕರೂ,ಲ ವಿದ್ವಾಂಸರೂ ಆಗಿದ್ದಾರೆ. ಇವರು ಕನ್ನಡ ವಿದ್ವತ್‌ಕ್ಷೇತ್ರಕ್ಕೆ ಸುಮಾರು ನಲವತ್ತು ಕೃತಿಗಳನ್ನು ಕೊಡುಗೆಯಾಗಿ ನೀಡಿದ್ದಾರೆ. ಹಳಗನ್ನಡ, ನಡುಗನ್ನಡ, ವಚನಸಾಹಿತ್ಯ, ಛಂದಸ್ಸು, ವ್ಯಾಕರಣಗಳನ್ನು ಆಸಕ್ತಿಯ ಕ್ಷೇತ್ರವಾಗಿಸಿಕೊಂಡು, ಜೈನ, ಬೌದ್ಧ, ವೀರಶೈವ, ವೈಷ್ಣವ- ಧರ್ಮ ಸಾಹಿತ್ಯವನ್ನು ಆಳವಾಗಿ ಅಧ್ಯಯನಮಾಡಿ ಶ್ರೇಷ್ಠ ವಿದ್ವತ್ ಕೃತಿಗಳನ್ನು ಎಲ್. ಬಸವರಾಜು ಅವರು ಹೊರತಂದಿದ್ದಾರೆ.

ಎಲ್. ಬಸವರಾಜು ಅವರು ೧೯೧೯ ರ ಅಕ್ಟೋಬರ್ ೭ ರಂದು ಕೋಲಾರ ಜಿಲ್ಲೆಯ ಇಡಗೂರಿನಲ್ಲಿ ಈರಮ್ಮ ಹಾಗೂ ಲಿಂಗಪ್ಪ ದಂಪತಿಗಳ ಮಗನಾಗಿ ಜನಿಸಿದರು. ಇವರ ತಂದೆಯವರು ಅರ್ಚಕವೃತ್ತಿಯನ್ನು ಅವಲಂಬಿಸಿದ್ದರು. ಬಡತನದ ಬೇಗೆಯಲ್ಲಿ ಇವರ ಕುಟುಂಬ ನಲುಗುತ್ತಿತ್ತು. ಅರ್ಚಕವೃತ್ತಿಯಿಂದ ಬಂದ ಅಕ್ಕಿಯಿಂದಲೇ ಅನ್ನ: ಇಲ್ಲವೆಂದರೆ ಇಲ್ಲ. ಜೀವನನಿರ್ವಹಣೆಯು ಕಷ್ಟವಾಗಿತ್ತು. ಇಂತಹ ಕಷ್ಟಸ್ಥಿತಿಯಲ್ಲಿಯೂ ಬಸವರಾಜು ಅವರು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣವನ್ನು ಇಡಗೂರಿನಲ್ಲಿಯೇ ಮುಗಿಸಿದರು. ಅನಂತರ ಅವರ ಪ್ರತಿಕೂಲ ಪರಿಸ್ಥಿತಿಯು ವಿದ್ಯಾಭ್ಯಾಸಕ್ಕೆ ತಡೆಯನ್ನೇನೂ ಉಂಟುಮಾಡಲಿಲ್ಲ. ಅವರಿಗೆ ಉತ್ತಮ ಜ್ಞಾನ ಸಾಕ್ಷಾತ್ಕಾರಕ್ಕೆ 'ಸಿದ್ಧಗಂಗೆ' ಯು ನೆರವಾಯಿತು. ಸಿದ್ಧಗಂಗಾಮಠವನ್ನು ಸೇರಿದ ಇವರು ಅಲ್ಲಿಯೇ ಪ್ರೌಢಶಿಕ್ಷಣವನ್ನು ಮುಗಿಸಿದರು. ಅವರ ಸಾಧನೆಗೆ ಭದ್ರಬುನಾದಿಯು ದೊರೆತ್ತು ಸಿದ್ಧಗಂಗೆಯ ಮಠದಲ್ಲಿಯೇ. ಅನಂತರದ ಕಾಲೇಜು ಶಿಕ್ಷಣವನ್ನು ಅವರು ಮೈಸೂರು ಮಹಾರಾಜ ಕಾಲೇಜಿನಲ್ಲಿ ಮುಂದುವರಿಸಿ ಅಲ್ಲಿಂದಲೇ ಬಿ.ಎ. ಆನರ್ಸ ಮತ್ತು ಕನ್ನಡ ಎಂ.ಎ. ಪದವಿಗಳನ್ನು ಪಡೆದರು. ಈ ಅವಧಿಯಲ್ಲಿ ಕುವೆಂಪು ಮತ್ತು ಡಿ.ಎಲ್.ನರಸಿಹಾಚಾರ್ಯರು ಅವರ ಗುರುಗಳಾಗಿದ್ದು ಬಸವರಾಜು ಅವರಿಗೆ ಅಪಾರವಾದ ಸ್ಫೂರ್ತಿ ಪ್ರೋತ್ಸಾಹಗಳು ದೊರೆತವು.

ಎಂ.ಎ. ಪದವಿ ಪಡೆದ ಅನಂತರ ದಾವಣಗೆರೆಯ ಡಿ.ಅರ್.ಎಂ. ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿ ಎಲ್. ಬಸವರಾಜು ತಮ್ಮ ವೃತ್ತಿ ಜೀವನವನ್ನು ಆರಂಭಿಸುತ್ತಾರೆ.

ವಿದ್ಯಾರ್ಥಿಗಳೊಂದಿಗೆ ಆತ್ಮೀಯರಾಗಿ ವರ್ತಿಸುತ್ತಿದ್ದು, ಬಸವರಾಜು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಉತ್ತಮ ವಿದ್ವನ್ಮಣಿಗಳ ನಿರ್ಮಾಣಕ್ಕೆ ಕಾರಣವಾದರು.

ಬಸವರಾಜು ಅವರು ಮೈಸೂರಿನ ಮಹಾರಾಜ ಕಾಲೇಜಿಗೆ ವರ್ಗವಾಗಿ ಬಂದು, ಅನಂತರ ಸ್ನಾತಕೋತ್ತರ ಕನ್ನಡ ವಿಭಾಗದಲ್ಲಿ ಪ್ರವಾಚಕರಾಗಿ, ಪ್ರಾಧ್ಯಾಪಕರಾಗಿ ಸುಮಾರು ಮುವತ್ತು ವರ್ಷಗಳ ಕಾಲ ಕಾರ್ಯ ನಿರ್ವಹಿಸಿದ್ದಾರೆ. ಇವರು ‘ ಅಲ್ಲಮನ ವಚನ ಚಂದ್ರಿಕೆ’ ಪಿಎಚ್.ಡಿ ಪದವಿಯನ್ನು ಮತ್ತು ‘ಶಿವದಾಸ ಗೀತಾಂಜಲಿ’ ಗೆ ಡಿ.ಲಿಟ್ ಪದವಿಯನ್ನು ಪಡೆದಿದ್ದಾರೆ. ಎಂಬತ್ತೆಂಟರ ಇಳಿವಯಸ್ಸಿನಲ್ಲಿಯೂ ಕಾರ್ಯೋತ್ಸಾಹದಿಂದ ಸದಾ ಕ್ರಿಯಾಶೀಲರಾಗಿರುವ ಬಸವರಾಜು ಅವರು ನಿರಂತರವಾಗಿ ಪಾಂಡಿತ್ಯದ ಕೆಲಸಗಳನ್ನು ಮಾಡುತ್ತಾ ವಿದ್ವತ್ ಕ್ಷೇತ್ರದ ಸೇವೆಯಲ್ಲಿಯೇ ನಿರತರಾಗಿ ಮೈಸೂರಿನಲ್ಲಿಯೇ ನೆಲೆಸಿದ್ದಾರೆ.

"ಬಸವರಾಜು ಅವರದು ತಳಮಳದ, ಚಡಪಡಿಕೆಯ ವ್ಯಕ್ತಿತ್ವ. ಅವರ ಮನಸ್ಸು ಕುದಿಯುತ್ತದೆ, ಹೃದಯ ತಣ್ಣಗಿರುತ್ತದೆ, ಮಾತು ಚಾಟಿಯೇಟಿನಂತಿರುತ್ತದೆ, ಸ್ಪರ್ಶ ಆಪ್ತವಾಗಿರುತ್ತದೆ; ಬರೆಹ ಬಿರುಸಾಗಿರುತ್ತದೆ. ಭಾವ ಮೃದುವಾಗಿರುತ್ತದೆ. ಅಲಗು ಮಾತಿನ, ರೇಗು ಚಹರೆಯ ವ್ಯಕ್ತಿ ಎಂದು ಹೊರನೋಟಕ್ಕೆ ಎನಿಸಿದರೂ ಪರಿಣಾಮದಲ್ಲಿ ವಿಚಾರವಂತಿಕೆತ ನಿರ್ದಾಕ್ಷಿಣ್ಯದ ನಿರ್ಭೀತ ಸ್ವಭಾವದ ವ್ಯಕ್ತಿತ್ವ ಅವರದು. ಅವರು ಸರಿ ಎನಿಸಿದ್ದನ್ನು ಯಾವ ಘಳಿಗೆಯಲ್ಲಾದರೂ ಎಂಥ ಸಂದರ್ಭದಲ್ಲಾದರೂ ಆಡಬಲ್ಲರು, ಮಾಡಬಲ್ಲರು. ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನ ಅಧ್ಯಕ್ಷರಾಗಿಯೂ, ಅದರ ಅಧ್ಯಕ್ಷ ಪಟ್ಟದ ಮೆರವಣಿಗೆ ನಿರಾಕರಿಸಬಲ್ಲರು; ನಂಜನಗೂಡಿನ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪಟ್ಟ ತಿರಸ್ಕರಿಸಬಲ್ಲರು; ಚಿದಾನಂದ ಪ್ರಶಸ್ತಿ ಪ್ರದಾನ ಸಮಾರಂಭವನ್ನು ಒಲ್ಲದೆ ನಿಲ್ಲಬಲ್ಲರು. ಅವರದು ಇತರರನ್ನು ಆಶ್ರಯಿಸದ, ಹಿಂಬಾಲಕರ ಗುಂಪು ಕಟ್ಟದ ಒಂಟಿ ಸಲಗದ ಸಾಹಿತ್ಯ ವಿಹಾರ. ಇದರಿಂದಲೇ ಅವರು ಸಂಸ್ಥೆ ಕಟ್ಟಲಿಲ್ಲ, ಸಂಸ್ಥೆಯ ನೇತಾರರಾಗಲಿಲ್ಲ. ಆದರೆ ಒಂದು ಸಂಸ್ಥೆ ಮಾಡಬಹುದಾದ ಕೆಲಸಗಳನ್ನು ಮಾಡಿದರು"[೧] ಎಂಬ ಎನ್. ಎಸ್. ತಾರನಾಥ್ ಅವರ ಅಭಿಪ್ರಾಯ ಬಸವರಾಜು ಅವರ ಪೂರ್ಣವ್ಯಕ್ತಿತ್ವದ ಚಿತ್ರಣವನ್ನು ಕಟ್ಟಿಕೊಡುತ್ತದೆ.

ಬಸವರಾಜು ಅವರು ೫೦ ಕ್ಕೂ ಹೆಚ್ಚು ಕೃತಿಗಳನ್ನು ಸಾಹಿತ್ಯವಿದ್ವತ್ ಸಂಶೋಧನಾ ಕ್ಷೇತ್ರಗಳಿಗೆ ಕೊಡುಗೆಯಾಗಿ ನೀಡಿದ್ದಾರೆ. ಎನ್. ಎಸ್. ತಾರನಾಥ್ ಅವರು ಬಸವರಾಜು ಅವರ ಸಾಹಿತ್ಯ ಕೃಷಿಯನ್ನು ಗ್ರಂಥಸಂಪಾದನೆ, ಕಾವ್ಯಾನುವಾದ, ಸಂಶೋಧನಾ ಬರಹ, ಸರಳ ಗದ್ಯಾನುವಾದ ಎಂದು ವಿಭಾಗಿಸುತ್ತಾರೆ. ಬಸವರಾಜು ಅವರು ಪ್ರಾಚೀನ ಕನ್ನಡ ಸಾಹಿತ್ಯದ ಪಂಪ,ರನ್ನ ಹಾಗೂ ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು, ಸರ್ವಜ್ಞ, ನಿಜಗುಣಶಿವಯೋಗಿ, ನಾಗವರ್ಮ, ಕೇಶಿರಾಜ ಮುಂತಾದ ಮುಖ್ಯಲೇಖಕರ ಬಗ್ಗೆ ಅವರ ಕೃತಿಗಳ ಬಗ್ಗೆ ಸಂಶೋಧನೆ, ಗ್ರಂಥಸಂಪಾದನೆ ಮುಂತಾದ ಕಾರ್ಯಗಳನ್ನು ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ಇದೆಲ್ಲದರ ಫಲಿತವಾಗಿಯೇ ಬಸವರಾಜು ಅವರ ವಿದ್ವತ್ ಪ್ರತಿಭೆಯಿಂದ ಮಹತ್ವದ ಕೃತಿಗಳು ಹೊರಬಂದಿವೆ.

---

೧. ಎನ್.ಎಸ್.ತಾರಾನಾಥ, ಎಲ್.ಬಸವರಾಜು, ಸಾಲುದೀಪಗಳು, ಸಂ.ಜಿ.ಎಸ್.ಸಿದ್ಧಲಿಂಗಯ್ಯ ಎಂ.ಎಚ್.ಕೃಷ್ಣಯ್ಯ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಮೂರನೆ ಮುದ್ರಣ ಪುಟ ೩೭೦

"ವಚನಸಾಹಿತ್ಯ ಮೊದಲುಗೊಂಡು ಅಥವಾ ಅದೇ ಇಡಿಯಾಗಿ ಪ್ರಮುಖವಾಗಿ ಇಲ್ಲಿಯವರೆಗೆ ಏನೆಲ್ಲಾ ಗ್ರಂಥಗಳು ಸಂಪಾದನೆಯಾಗಿವೆಯೋ ಅವೆಲ್ಲ ಪುನರ್ ಪರಿಷ್ಕರಣಗೊಳ್ಳಬೇಕು. ಹೊಸಶತಮಾನದ ಆಗುಹೋಗು ಹಿನ್ನಲೆಯಲ್ಲಿ ಪುನರ್ ವಿಮರ್ಶೆ, ಪುನರ್ ಮೌಲ್ಯೀಕರಣ ನಡೆಯಬೇಕು. ಇಲ್ಲಿ ಕೆಲಸಮಾಡುವ ವ್ಯಕ್ತಿಗಳು ಹಳಗನ್ನಡಸಾಹಿತ್ಯವನ್ನು ಆಳವಾಗಿ ಅಧ್ಯಯನ ಮಾಡಿದವರಾಗಿರಬೇಕು. ಈ ಕ್ಷೇತ್ರದಲ್ಲಿ ಕೆಲಸಮಾಡುವರು ಕೂಲಿ ಆಳಾಗಬಾರದು. ತಮ್ಮನ್ನು ತೆತ್ತುಕೊಂಡು, ತಮ್ಮನ್ನು ಅರ್ಪಿಸಿ ಕೊಂಡು ಕೆಲಸ ಮಾಡುವವರು ಬರಬೇಕು. ಪಾಂಡಿತ್ಯಸಂಸ್ಕೃತಿಯ ಬಗ್ಗೆ ಅಭಿಮಾನ ಕಠಿಣ ವಿಮರ್ಶೆಗೆ ಹಿಂಜರಿದಂತಹ ವ್ಯಕ್ತಿಗಳು ಸಂಶೋಧನೆ ಮುಂದುವರಿಸಿ ಹಳೆಯ ಗ್ರಂಥಗಳನ್ನು ಜನರಿಗೆ ಅರ್ಪಿಸಬೇಕು. ಅದೇ ನಾವು ಅವರಿಗೆ ಮಾಡುವ ಸೇವೆ"[೨] ಎಂಬ ಎಲ್.ಬಸವರಾಜು ಅವರ ಮಾತುಗಳು ಸಂಶೋಧನಾ ಕ್ಷೇತ್ರದ ಮಾರ್ಗದರ್ಶಿ ಸೂತ್ರಗಳೆನಿಸುತ್ತವೆ.

ಬಸವರಾಜು ಅವರು ಆದಿಕವಿಯ 'ಆದಿಪುರಾಣ', 'ಸರಳ ಪಂಪಭಾರತ', 'ಅಲ್ಲಮನ ವಚನ ಚಂದ್ರಿಕೆ', 'ಶಿವದಾಸ ಗೀತಾಂಜಲಿ', ' ಬಸವಣ್ಣನ ವಚನಗಳು', 'ಅಕ್ಕನ ವಚನಗಳು', 'ದೇವರ ದಾಸಿಮಯ್ಯನ ವಚನಗಳು', 'ಶಿವಗಣಪ್ರಸಾದಿ ಮಹದೇವಯ್ಯನ ಶೂನ್ಯಸಂಪಾದನೆ', 'ತೊರವೆ ರಾಮಾಯಣ ಸಂಗ್ರಹ', 'ಶೃಂಗಾರ ನಿದರ್ಶನ', 'ಕನ್ನಡ ಛಂದಸ್ಸಂಪುಟ', ಕೇಶಿರಾಜನ ಶಬ್ದಮಣಿದರ್ಪಣಂ', ಮುಂತಾದ ಕೃತಿಗಳನ್ನು ಗ್ರಂಥಸಂಪಾದನಾ ಕ್ಷೇತ್ರಕ್ಕೆ ನೀಡಿದ್ದಾರೆ. 'ಬುದ್ಧಚರಿತ', 'ಸೌಂದರನಂದ', ಭಾಸನ ನಾಟಕಗಳ ಗದ್ಯಾನುವಾದ, 'ಗೂಳೂರು ಸಿದ್ಧವೀರಣಾರ್ಯನ ಶೂನ್ಯ ಸಂಪಾದನೆ', ನಿಜಶಿವಯೋಗಿಗಳ ತತ್ತ್ವದರ್ಶನ, ರಾಘವಾಂಕನ ಸಿದ್ಧರಾಮ ಚಾರಿತ್ರ್ಯ', ಹರಿಶ್ಚಂದ್ರಕಾವ್ಯಗಳ ಸರಳ ಗದ್ಯಾನುವಾದಗಳನ್ನು ಅನುವಾದ ಕ್ಷೇತ್ರಕ್ಕೆ ನೀಡಿದ್ದಾರೆ. ಇವರು ಸಂಶೋಧಕರಷ್ಟೆ ಅಲ್ಲ, 'ಕವಿ'ಯೂ ಕೂಡ ಹೌದು. ಇದಕ್ಕೆ ನಿದರ್ಶನವಾಗಿ ಇವರ 'ಠಾಣಾಂತರ', 'ಜಾಲಾರಿ' ಎಂಬ ಎರಡು ಕವನ ಸಂಕಲನಗಳನ್ನು ನೋಡಬಹುದಾಗಿದೆ.

ಬಸವರಾಜು ಅವರು ಮಾಡಿರುವ ಸಾಹಿತ್ಯ ಸೇವೆ ಸ್ಮರಣೀಯವಾಗಿದ್ದು ಒಂದು ಸಂಸ್ಥೆ ಮಾಡುವ ಕೆಲಸಕ್ಕಿಂತ ಮಿಗಿಲಾಗಿದೆ. ಅವರನ್ನು ಅರಸಿಕೊಂಡು ಅನೇಕ ಪ್ರಶಸ್ತಿ ಪುರಸ್ಕಾರಗಳು ಬಂದಿವೆ. 'ಅಲ್ಲಮನ ವಚನ ಚಂದ್ರಿಕೆ' ಕೃತಿಗೆ 'ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ', 'ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿ ಹಬ್ಬದ ಪುರಸ್ಕಾರ', ಸಂ.ಶಿ.ಭೂಸನೂರಮಠ ಪ್ರತಿಷ್ಠಾನ ಪ್ರಶಸ್ತಿ,೨೦೦ ದಲ್ಲಿ ಕರ್ನಾಟಕ ಸರ್ಕಾರದ 'ಪಂಪಪ್ರಶಸ್ತಿ' ಹಾಗೂ ೨೦೦೧ ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ 'ಬುದ್ಧಚರಿತ'ಕ್ಕೆ ಅನುವಾದ ಪ್ರಶಸ್ತಿ, ೨೦೦೬ರಲ್ಲಿ 'ಬಸವಶ್ರೀ' ಪ್ರಶಸ್ತಿಗಳು ಬಂದಿವೆ.

"ಬಸವರಾಜು ಅವರು ಸದಾ ಕಾರ್ಯ ಮಗ್ನರು, ಈಗಲೂ ಹತ್ತಾರು ಗ್ರಂಥಗಳನ್ನು ಹಸ್ತಪ್ರತಿಗಳನ್ನು ಹರಡಿಕೊಂಡು, ಕನ್ನಡಕ ಹಾಕಿ, ಮೇಲೊಂದು ಭೂತಗನ್ನಡಿ ಹಿಡಿದು ನಿರಂತರ ಅಧ್ಯಯನದಲ್ಲಿ ತೊಡಗಿರುತ್ತಾರೆ. ದುಡಿದು ದುಡಿದು ಇವರಿಗೆ ದಣಿವಾಗಿಲ್ಲ ಬದಲಿಗೆ

---

೨. ಎನ್.ಎಸ್.ತಾರಾನಾಥ, ಎಲ್.ಬಸವರಾಜು, ಸಾಲುದೀಪಗಳು, ಸಂ.ಜಿ.ಎಸ್.ಸಿದ್ಧಲಿಂಗಯ್ಯ ಎಂ.ಎಚ್.ಕೃಷ್ಣಯ್ಯ, ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಮೂರನೆ ಮುದ್ರಣ ಪುಟ ೩೭೦

ದೇಹ ಮನಸ್ಸುಗಳು ಗಟ್ಟಿಗೊಂಡು ವಜ್ರದೇಹಿಯಾಗಿದ್ದಾರೆ. ಕಾಯಕವೇ ಕೈಲಾಸ ಎಂಬ ತತ್ವದ ಪರಿಪಾಲಕರಾದ ಇವರು ನಿರಂತರ ದುಡಿಮೆಯಿಂದ ದೇಹ ಮನಸ್ಸುಗಳ ಆರೋಗ್ಯ ವೃದ್ಧಿಯಾಗುತ್ತದೆ ಎಂಬುದನ್ನು ರುಜುವಾತು ಪಡಿಸಿದವರು"[೩] ಎಂಬ ಸಿ.ಪಿ.ಸಿದ್ಧಾಶ್ರಮ ಅವರ ಮಾತುಗಳು ಬಸವರಾಜು ಅವರ ಬದುಕನ್ನು ಮತ್ತಷ್ಟು ಉಜ್ವಲವಾಗಿ ಓದುಗರಿಗೆ ಕಟ್ಟಿಕೊಡುತ್ತದೆನ್ನಬಹುದು.

ಡಾ.ಎಲ್.ಬಸವರಾಜು ಅವರು ಹಳಗನ್ನಡ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಮಹತ್ವಪೂರ್ಣ ಕಾರ್ಯನಿರ್ವಹಿಸಿದ್ದಾರೆ. ಹಳಗನ್ನಡವೆಂದರೆ ಬೆಚ್ಚಿಬೀಳುವ ಪ್ರಸ್ತುತ ಸಮಾಜದಲ್ಲಿ ಕವಿರಾಜಮಾರ್ಗದ ಸುತ್ತಮುತ್ತಲಿನ ಪರಿಸರ ಹಾಗೂ ಪಂಪರನ್ನರಕಾವ್ಯಗಳನ್ನು ಆಮೂಲಾಗ್ರವಾಗಿ ಶೋಧಿಸಿ ಕೇಶಿರಾಜನ "ಶಬ್ದಮಣಿದರ್ಪಣಂ' ಹಾಗೂ ಕನ್ನಡ ಪ್ರಮುಖ ಛಂದೋಗ್ರಂಥಗಳ ಸಂಕಲನವಾದ "ಕನ್ನಡ ಛಂದಸ್ಸಂಪುಟ' ಎಲ್.ಬಸವರಾಜು ಅವರಿಂದ ಶುದ್ಧಪರಿಷ್ಕರಣೆಗೊಂಡಿವೆ. ಈ ಕೃತಿಗಳಿಗೆ ಬರೆದಿರುವ ಸುದೀರ್ಘವಾದ ಪೀಠಿಕೆ,ಪ್ರಸ್ತಾವನೆಗಳು ಕನ್ನಡಸಾಹಿತ್ಯಚರಿತ್ರೆಗೆ ವಿಶಿಷ್ಟ ದೃಷ್ಟಿಕೋನದ ಜೊತೆಗೆ ಹೊಸ ಆಯಾಮವನ್ನು ಒದಗಿಸುತ್ತವೆ. ಹಳಗನ್ನಡ ಕಾವ್ಯಕೃತಿಗಳನ್ನು ಸುಲಲಿತವಾಗಿ ಪರಿಶೋಧಿಸಿ ಜನಸಾಮಾನ್ಯರೆಡೆಗೆ ತಂದು ಅಗ್ಗಳಿಕೆ ಎಲ್.ಬಸವರಾಜು ಅವರದು. ಹಳಗನ್ನಡಸಾಹಿತ್ಯದ ಬಗೆಗಿನ ವಿದ್ವತ್‌ಪೂರ್ಣ ಕಾರ್ಯನಿರ್ವಹಿಸಿರುವ ಎಲ್. ಬಸವರಾಜು ಅವರ ಹಲಗನ್ನಡಸಾಹಿತ್ಯದ ಬಗೆಗಿನ ಕಾರ್ಯವನ್ನು ಮಗ್ರವಾಗಿ ಅಭ್ಯಸಿಸುವ ದೃಷ್ಟಿಯಿಂದ ಪ್ರಸ್ತುತ ಪ್ರಬಂಧಕ್ಕೆ ವಸ್ತುವಿಷಯವನ್ನಾಗಿ ಆಯ್ಕೆಮಾಡಿಕೊಂಡು ಸಂಶೋಧನೆ ಮಾಡಲು ಅಡಿಯಿಟ್ಟಿದ್ದೇನೆ.

---

೩. ಸಿ.ಪಿ.ಸಿದ್ಧಾಶ್ರಮ, ಶೋಧಸಂಪದ, ಸಂವಹನ ಪ್ರಕಾಶನ, ಮೈಸೂರು, ಮೊದಲ ಮುದ್ರಣ ಪುಟ-೧೯

## ೧. ಪಂಪನ ಆದಿಪುರಾಣ

'ಆದಿಪುರಾಣಂ'ಕನ್ನಡದ ಮೊತ್ತಮೊದಲ ಉಪಲಬ್ದ ಕಾವ್ಯ ಎಂಬ ಕೀರ್ತಿಗೆ ಭಾಜನವಾಗಿದೆ.ಪಂಪ ಪ್ರಣೀತವಾದ ಈ ಕೃತಿ ಕನ್ನಡಸಾಹಿತ್ಯದ ಆದಿಕೃತಿ ಮಾತ್ರವಲ್ಲದೆ ಮುಂದಿನ ಪರಂಪರೆಗೆ ಅಡಿಗಲ್ಲಾಯಿತು.ಇದರಿಂದ ಕನ್ನಡಸಾಹಿತ್ಯದ ಕ್ಷೇತ್ರದಲ್ಲಿ ಹೊಸಹಾದಿ ನಿರ್ಮಾಣವಾಯಿತು.ಜೈನಧರ್ಮದ ಮೊದಲ ತೀರ್ಥಂಕರನಾದ ವೃಷಭನಾಥನ ಕಥೆಯನ್ನು ಒಳಗೊಂಡಿರುವ ಈ ಕೃತಿ ಕೇವಲ ಧಾರ್ಮಿಕ ಚಿಂತನೆಯಲ್ಲಿ ಮಾತ್ರವಲ್ಲದೆ, ಕಾವ್ಯಧರ್ಮದ ಹೂರಣವನ್ನು ಅಂತರ್ಗತವಾಗಿಸಿಕೊಂಡಿದೆ.ಈ ಕಾರಣದಿಂದಲೇ 'ಆದಿಪುರಾಣಂ' ಸಾವಿರಾರು ವರ್ಷಗಳಿಂದಲೂ ಉಳಿದುಬಂದಿದೆ.

'ಆದಿಪುರಾಣಂ' ರಚಿತವಾಗಿರುವುದು ಕ್ರಿ.ಶ.೯೪೧ ರಲ್ಲಿಯೇ ಆದರೂ ಕನ್ನಡಿಗರಿಗೆ ಅದರ ದರ್ಶನವಾದುದು ಸುಮಾರು ಒಂದು ಶತಮಾನಗಳ ಹಿಂದೆಯಷ್ಟೆ. ಇದಕ್ಕೆ ಪ್ರಮುಖವಾಗಿ ಎರಡು ಕಾರಣಗಳಿರಬಹುದು. ಒಂದು,ನಮ್ಮ ಜನರ ಐತಿಹಾಸಿಕ ಪ್ರಜ್ಞೆಯ ವಿಸ್ಮೃತಿ. ಮತ್ತೊಂದು,'ಆದಿಪುರಾಣಂ' ಜೈನಧರ್ಮ ತತ್ತ್ವವನ್ನು ಧಾರಣೆ ಮಾಡಿಕೊಂಡಿರುವುದು. ಕನ್ನಡಿಗರಿಗೆ ಪಂಪಕವಿಯ ದರ್ಶನವಾದುದು ಬಿ.ಎಲ್.ರೈಸ್ ಅವರಿಂದ. ಈ ಸಂಗತಿಯನ್ನು ಕುರಿತು ಎಲ್.ಬಸವರಾಜು ಅವರು 'ಆದಿಪುರಾಣಂ'ನ ಪರಿಷ್ಕೃತ ಆವೃತ್ತಿಯ 'ಅರಿಕೆ'ಯಲ್ಲಿ "ಮನೆಯವನನ್ನು ಮನೆಯವರಿಗೆ ವೈದುಷ್ಯದಿಂದ ಪರಿಚಯ ಮಾಡಿಕೊಡಲು ಹೊರಗಡೆಯಿಂದ ಒಬ್ಬ ರೈಸ ಬರಬೇಕಾಯಿತು" ಹೀಗೆಂದಿದ್ದಾರೆ. ಬಿ.ಎಲ್.ರೈಸ್ ಪಂಪನ ಎರಡೂ ಕಾವ್ಯಗಳನ್ನು 'ಬಿಬ್ಲಿಯೋಥಿಕ ಕರ್ನಾಟಿಕಾ' ಮಾಲೆಯಲ್ಲಿ ಹೊರತರುವ ಪ್ರಯತ್ನ ಮಾಡಿದರು.ತಮ್ಮ ಸಹಾಯಕರಾಗಿದ್ದ ಎಸ್.ಜಿ.ನರಸಿಂಹಾಚಾರ್‌ರಿಗೆ ಪಂಪನ 'ಆದಿಪುರಾಣಂ' ಕೃತಿಯ ಪರಿಷ್ಕರಣದ ಕಾರ್ಯಭಾರವಹಿಸಿ ಕ್ರಿ.ಶ.೧೯೦೦ ರಲ್ಲಿ ಅದನ್ನು ಪ್ರಕಟಿಸುವಲ್ಲಿ ಯಶಸ್ವಿಯಾದರು. {ಇದಕ್ಕಿಂತ ಎರಡು ವರ್ಷ ಮುಂಚೆ ೧೮೯೮ ರಲ್ಲಿ 'ಪಂಪಭಾರತ'ವನ್ನು ಇದೇ ಮಾಲೆಯಲ್ಲಿ ಹೊರತಂದಿದ್ದನ್ನು ನೆನೆಯಬಹುದು.}ಅನಂತರದಲ್ಲಿ ಪಂಪಕವಿಯ ಬಗ್ಗೆ ದೇಶಿಯ ವಿದ್ವಾಂಸರಲ್ಲಿ ಸಹಜವಾಗಿಯೇ ಆಸಕ್ತಿ ಕೆರಳಿತು.

"ಎಸ್.ಜಿ.ನರಸಿಂಹಾಚಾರ್ಯರು ಶ್ರವಣಬೆಳ್ಗೊಳ ಮಠದ ಎರಡು ಹಸ್ತಪ್ರತಿಗಳನ್ನೂ, ಪ್ರಾಚ್ಯ ಕೋಶಗಾರದ ಎರಡು ಹಸ್ತಪ್ರತಿಗಳನ್ನೂ ತಮ್ಮ ಪರಿಷ್ಕರಣಕ್ಕೆ ಬಳಸಿದ್ದು, ಇವುಗಳಲ್ಲಿ ಮಠದ ಪ್ರತಿಗಳಲ್ಲಿ ಒಂದನ್ನು ಆಧಾರವಾಗಿಟ್ಟುಕೊಂಡು ಉಳಿದವನ್ನು ಯಥೋಚಿತವಾಗಿ ಉಪಯೋಗಿಸಿದ್ದಾರೆ. ಮುಖ್ಯಪಾಠಭೇದಗಳನ್ನು ಅಡಿಟಿಪ್ಪಣಿಗಳಲ್ಲಿ ತೋರಿಸಿದ್ದಾರೆ. ಬಹುಶಃ ಮೊದಲ ಸಲ ಪಂಪಕವಿಯ ಕಾಲದೇಶಾದಿಗಳ ವಿಸ್ತೃತ ಚರಿತ್ರೆಯೊಂದಿಗೆ ಪೂರ್ವಕವಿಗಳ ಅನುಸರಣೆ, ಉತ್ತರಕಾಲೀನ ಕವಿಗಳ ಮೇಲೆ ಪ್ರಭಾವ, ಇದನ್ನು ಉದಾಹರಣೆಗಳೊಂದಿಗೆ ಅವರು ಗುರುತಿಸಿದ್ದಾರೆ; ಜೊತೆಗೆ ವಿಸ್ತಾರವಾಗಿ 'ಆದಿಪುರಾಣಂ'ದ ಕಥಾಸಾರವನ್ನೂ ಬರೆದಿದ್ದಾರೆ"[೧]. ಆದರೆ ನರಸಿಂಹಾಚಾರ್ ಅವರು ತಮ್ಮ ಪರಿಷ್ಕರಣದಲ್ಲಿ ಪಂಪನ 'ಆದಿಪುರಾಣಂ' ಹಾಗೂ ಸಂಸ್ಕೃತದ 'ಮಹಾಪುರಾಣ' ದಿಂದ ಪ್ರೇರಿತವಾಗಿರುವುದನ್ನು ತಿಳಿಸಿಲ್ಲ.

---

೧. ಟಿ.ವಿ.ವೆಂಕಟಾಚಲಶಾಸ್ತ್ರಿ, ಪರಿಷ್ಕೃತ ಮುದ್ರಣ, **ಆದಿಪುರಾಣಂ** 'ಸಂಪಾದಕರ ಮಾತು' ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೫ ಪುಟ ಸಂಖ್ಯೆ : ೭

ತಮಗೆ ದೊರೆತ ನಾಲ್ಕು ಹಸ್ತಪ್ರತಿಗಳಲ್ಲಿ ಒಂದನ್ನು ಮಾತ್ರ ಮೂಲವಾಗಿಟ್ಟುಕೊಂಡು ಉಳಿದಿದ್ದನ್ನು ಹೋಲಿಕೆಗಾಗಿ ಮಾತ್ರ ಬಳಸಲಾಗಿದೆ. ಹೀಗೆ ಅವರ ಶುದ್ಧರೂಪದ ಪರಿಷ್ಕರಣ ಪ್ರಕಟವಾದುದು ಕ್ರಿ.ಶ. ೧೯೦೦ ರಲ್ಲಿ.

ಎಸ್.ಜಿ.ನರಸಿಂಹಾಚಾರ್ ಅವರಿಂದ ಪರಿಷ್ಕೃತಗೊಂಡ ಪ್ರತಿ ಮುಗಿದುಹೋಗಿ ಓದುಗರಿಗೆ ದುರ್ಲಭವಾದ ಕಾರಣ, ೧೯೫೩ ರಲ್ಲಿ ಪ್ರೊ. ಕೆ.ಜಿ.ಕುಂದಣಗಾರ ಮತ್ತು ಎ.ಪಿ.ಚೌಗಲೆ ಅವರು ಆದಿಪುರಾಣದ ಪರಿಷ್ಕೃತ ಆವೃತಿಯನ್ನು ಹೊರತಂದರು.ಇದರಲ್ಲಿ ಸಂಸ್ಕೃತದ 'ಮಹಾಪುರಾಣ' ದೊಂದಿಗೆ ಹೋಲಿಸಿ ವಿಮರ್ಶೆಮಾಡಿದುದು ವಿಶೇಷವಾಗಿತ್ತು. ಚೌಗುಲೆ ಅವರು ಮೂಡಬಿದರೆ ಜೈನಮಠದ ಶ್ರೀ ಚಾರುಕೀರ್ತಿ ಭಟ್ಟಾರಕ ಪಟ್ಟಾಚಾರ್ಯರ ಶ್ರುತಭಂಡಾರದಿಂದ ತಂದ ಎರಡು ಆದಿಪುರಾಣದ ಓಲೆಗರಿ ಪ್ರತಿಗಳ ಸಹಾಯದಿಂದ ಈ ಪರಿಷ್ಕೃತ ಆವೃತ್ತಿಯನ್ನು ಹೊರತರಲಾಯಿತು. ಜೊತೆಗೆ, ಆ.ನೇ.ಉಪಾಧ್ಯೆಯವರ ಸಲಹೆ ಸೂಚನೆಗಳನ್ನು ಅಗತ್ಯಪೂರ್ಣವಾಗಿ ಬಳಸಿಕೊಂಡಿರುವುದುದಾಗಿ ಸಂಪಾದಕರೇ ಪರಿಷ್ಕೃತ ಪ್ರಕಟಣದ ಪೀಠಿಕೆಯಲ್ಲಿ ತಿಳಿಸಿದ್ದಾರೆ. ಅಲ್ಲದೆ ಪಾರಿಭಾಷಿಕ ಪದಕೋಶ ತಯಾರಿಕೆಗೆ ಶ್ರೀ ಜಿನದಾನ ಘಡಕುಲೆ ಅವರ ಕೃತಿಯನ್ನು, ಉಪೋದ್ಘಾತದಲ್ಲಿ ಬರುವ ಪಂಪನ ಜೀವನ ವಿಚಾರಕ್ಕೆ ಸಂಬಂಧಿಸಿದಂತೆ ಎಸ್.ಸಿ.ನಂದೀಮಠ ಅವರ ಸಲಹೆಗಳನ್ನು ಯಥೋಚಿತವಾಗಿ ಬಳಸಿಕೊಳ್ಳಲಾಗಿದೆ ಎಂದಿದ್ದಾರೆ. ಈ ಪರಿಷ್ಕೃತ ಆವೃತ್ತಿಗೆ ಎನ್.ಎಸ್.ಲೋಕೂರ (ಮುಂಬಯಿ ಹೈಕೋರ್ಟ್‌ನ ನಿವೃತ್ತ ನ್ಯಾಯಮೂರ್ತಿಗಳು) ಅವರು ಸೊಗಾಸಾದ ಮುನ್ನುಡಿ ಬರೆದಿದ್ದಾರೆ. ಪರಿಷ್ಕರಣದ ಕಾರ್ಯವೈಖರಿಯ ಬಗ್ಗೆ ವಿವರಿಸುತ್ತಾ- "ಬೇರೆ ಬೇರೆ ಹಸ್ತಲಿಖಿತ ಪ್ರತಿಗಳನ್ನು ದೊರಕಿಸಿ, ಅವುಗಳನ್ನು ಅಭ್ಯಸಿಸಿ, ವಿಮರ್ಶೆಮಾಡಿ ಕನ್ನಡ ಆದಿಪುರಾಣದ ಶುದ್ಧವಾದ ಗ್ರಂಥಪಾಠವನ್ನು ಒದಗಿಸಿಕೊಡಲು ಸಾಕಷ್ಟು ಪರಿಶ್ರಮಮಾಡಿದ್ದಾರೆ. ಪಾಠಾಂತರಗಳನ್ನು ಅಡಿಟಿಪ್ಪಣಿಯಲ್ಲಿ ಕೊಟ್ಟಿದಾರೆ. ಕಥಾಸಾರಾಂಶ, ಪಾರಿಭಾಷಿಕ ಪದಕೋಶ ಮುಂತಾದ ಅಮೂಲ್ಯವಾದ ಅನುಬಂಧಗಳನ್ನು ಕೊಟ್ಟು ಕಾವ್ಯದ ಅಭ್ಯಾಸವು ಸುಗಮವಾಗುವಂತೆ ಮಾಡಿದ್ದಾರೆ. ವಿದ್ವತ್ಪ್ರಚುರವಾದ ಪೀಠಿಕೆಯಲ್ಲಿ ಅಲ್ಲಲ್ಲಿ ಬಂದಿರುವ ಸಂಗತಿಗಳನ್ನು ಶೇಖರಿಸಿ ಪಂಪನ ಜೀವನವನ್ನು ಚಿತ್ರಿಸಿದ್ದಾರೆ.ಕವಿಗೆ ಅಲ್ಲಲ್ಲಿ ಆಧಾರವಾಗಿರುವ ಪ್ರಾಚೀನ ಆಕರಗಳನ್ನೂ ಮುಂದಿನ ಕೃತಿಗಳಲ್ಲಿ ಕಂಡುಬಂದ ಆತನ ಪ್ರಭಾವವನ್ನೂ ಪೀಠಿಕೆಯಲ್ಲಿ ತೋರಿಸಿದುದು ಸಂಪಾದಕರ ಪಾಂಡಿತ್ಯದ ದ್ಯೋತಕವಾಗಿದೆ" ಎಂದಿದ್ದಾರೆ. ಕರ್ನಾಟಕ ವಿಶ್ವವಿದ್ಯನಿಲಯದ ಸಹಾಯಧನದೊಂದಿಗೆ ಈ ಕೃತಿ ಬೆಳಗಾವಿಯಲ್ಲಿ ಪ್ರಕಟವಾಯಿತು.

ಕೆ.ಜಿ.ಕುಂದನಗಾರ ಹಾಗೂ ಎ.ಪಿ.ಚೌಗಲೆಯವರು ತಮ್ಮ ಸಂಪಾದನ ಕಾರ್ಯದ ಸ್ವರೂಪವನ್ನು ನಿರೂಪಿಸುತ್ತಾ- ಸಂಸ್ಕೃತ ಪದ್ಯಗಳಲ್ಲಿ ಹಾಗೂ ಸಂಸ್ಕೃತಭೂಯಿಷ್ಠಾದ ಕನನ್ಡ ಪದ್ಯಗಳಲ್ಲಿ ದೋಷಗಳು ಹೆಚ್ಚಾಗಿವೆ ಎಂದಿ ಒಪ್ಪಿಕೊಂಡು ಪ್ರಾಮಾನಿಕತೆ ಮೆರೆದಿದ್ದಾರೆ. ಇದರ ಬಗೆಗಿನ ತಮ್ಮ ಅಸಹಾಯತೆಯನ್ನು ವ್ಯಕ್ತಪಡಿಸಿದ್ದಾರೆ. ಈ ಪರಿಷ್ಕರಣ ಆವೃತ್ತಿಗೆ ಕೆಲವು ಪ್ರಾಚೀನಗ್ರಂಥಗಳ ಆಧಾರಪಡೆದಿದ್ದರೂ, ಕೆಲವು ದೋಷಗಳು ನುಸಿಳಿವೆ ಅವನ್ನು ಪಂಡಿತರು ಕಂಡುಹಿಡಿದು, ಅವಕ್ಕೆ ಪರಿಹಾರ ದೊರಕಿಸಬೇಕೆಂದೂ ವಿನಂತಿಸಿದ್ದಾರೆ".

ಸಂಪಾದಕರು ಈ ಪರಿಷ್ಕರಣಕ್ಕೆ ಬಳಸಿರುವ ಹಸ್ತಪ್ರತಿಗಳ ಬಗ್ಗೆ ವಿವರಿಸುತ್ತಾ: ಈ ಪ್ರಕಟಣೆಗೆ ಒಟ್ಟು ೩ ಹಸ್ತಪ್ರತಿಗಳನ್ನು ಬಳಸಿಕೊಳ್ಳಲಾಗಿದೆ.ಅದರಲ್ಲಿ ಒಂದು ಈ ಹಿಂದೆ

ಸಂಪಾದಿಸಿದ್ದ ಎಸ್.ಜಿ.ನರಸಿಂಹಾಚಾರ್ ಅವರದು, ಉಳಿದೆರಡು ಮೂಡಬಿದರೆ ಜೈನಮಠದ ಶ್ರುತಭಂಡಾರದಿಂದ ದೊರಕಿದವುಗಳು. ಈ ಪ್ರತಿಗಳಲ್ಲಿನ ಪಾಠಾಂತರಗಳನ್ನು ಗಮನಿಸಿ, ವ್ಯಾಕರಣ, ಛಂದಸ್ಸು,ಉಪಮೆಗಳಿಗೆ ಸರಿಹೊಂದುವ ಪಾಟಗಳನ್ನು ಇರಿಸಿಕೊಂಡು ಮಿಕ್ಕಪಾಠಗಳನ್ನು ಅಡಿಟಿಪ್ಪಣಿಯಲ್ಲಿ ನೀಡಲಾಗಿದೆ. ಕೆಲವು ಪಾಠಗಳನ್ನು ಅನಗತ್ಯವೆಂದು ಬಿಡಲಾಗಿದೆ ಎಂದಿದ್ದಾರೆ. ಪಾರಿಭಾಷಿಕ ಶಬ್ದಗಳಲ್ಲಿನ ದೋಷಗಳನ್ನು ಕೆಲವು ಸಂಸ್ಕೃತ ಕೃತಿಗಳ ಸಹಾಯದಿಂದ ಸರಿಪಡಿಸಿ ಆ ಆ ಆಧಾರವನ್ನು ಅಡಿಟಿಪ್ಪಣಿಯಲ್ಲಿ ಕೊಡಲಾಗಿದೆ ಎಂದಿದ್ದಾರೆ.ಪಂಪನ ಕೃತಿಗಳಲ್ಲಿನ ಪದ್ಯಗಳ ಆಧಾರದಿಂದ ಪಂಪನ ಜಿವನ ಚರಿತ್ರೆ ಕಟ್ಟಿಕೊಡುವ ಪ್ರಯತ್ನಮಾಡಿದ್ದಾರೆ. ಇದು ಕೇವಲ ತಮ್ಮ ಕಲ್ಪನೆಮಾತ್ರವೇ ಹೊರೆತು, ಸ್ಪಷ್ಟತೆಯಿಲ್ಲ ಎಂದು ಅವರೇ ಹೇಳಿಕೊಂಡಿದ್ದಾರೆ. ಜೊತೆಗೆ, ಸಿದ್ಧಾಂತಚಕ್ರೇಶ್ವರರಾದ ಮಾಘಣಂದ್ಯಾಚಾರ್ಯರ* 'ಶಾಸ್ತ್ರಸಮುದಾಯ ಸಮುಚ್ಛಯ' ಕೃತಿಯ ಮೇಲೆ ಪಂಪನ ಪ್ರಭಾವವಾಗಿದೆ ಎಂದು ಕೆಲವು ಪದ್ಯಗಳನ್ನು ಹೋಲಿಸಿ ತಿಳಿಸುತ್ತಾರೆ. ಇವಗಳ ಜೊತೆಗೆ ಪಂಪನಂತೆ ಇತರ ಭಾಷೆಗಳಲ್ಲಿನ 'ಆದಿಪುರಾಣ'ಗಳ ಪಟ್ಟಿಕೊಡುತ್ತಾರೆ. ಅಂದರೆ ಸಂಸ್ಕೃತ,ಪ್ರಾಕೃತ ಮತ್ತು ಅಪಭ್ರಂಶಗಳಲ್ಲಿ ರಚಿತವಾದ 'ಆದಿಪುರಾಣ'ಗಳ ಪಟ್ಟಿಹಾಕುವುದರೊಂದಿಗೆ, ಅವುಗಳ ಮೇಲಾಗಿರುವ ಪ್ರೇರಣೆ ಪ್ರಭಾವವನ್ನು ಸಂಕ್ಷೇಪವಾಗಿ ತಿಳಿಸಿದ್ದಾರೆ. ಅಲ್ಲದೆ 'ಆದಿಪುರಾಣ'ದ ಕಥಾಹಂದರ ಇತರರಲ್ಲಿ ಆನುಷಂಗಿಕವಾಗಿ ಬಳಕೆಗೊಂಡಿರುವುದನ್ನು ಗುರುತಿಸಲಾಗಿದೆ.'ಆದಿಪುರಾಣ'ದ ರಚನೆಯಲ್ಲಿ ಜಿನಾಸೇನಾಚಾರ್ಯರ ಪೂರ್ವಪುರಾಣವನ್ನು ಹೆಜ್ಜೆಹೆಜ್ಜೆಗೂ ಅನುಸರಿಸಿರುವುದನ್ನು ಉದಾಹೃತ ಪದ್ಯಗಳ ಮೂಲಕ ಸ್ಪಷ್ಟಪಡಿಸಿದ್ದಾರೆ. ಹಿಂದೆ ಎಸ್,ಜಿ.ನರಸಿಂಹಾಚಾರ್ಯರು ಇದನ್ನು ಗುರಿತಿಸಿರಲಿಲ್ಲ ಎಂಬುದನ್ನು ಇಲ್ಲಿ ನೆನೆಯಬಹುದು. ಆದರೆ ಈ ಹಿಂದೆ ಎಸ್.ಜಿ.ನರಸಿಂಹಾಚಾರ್ಯರು ಪಂಪನ - "ಸತ್ಕವಿವ್ಯಾಸಸಮಾಗಮಾನ್ವಿತಮನಾದಿಪುರಾಣನೆಯ್ದೆ ಪೇೞ್ದು ವಾಕ್ಶ್ರೀಸುಭಗಂ ಪುರಾಣಕವಿ" ಎಂಬ ಪಂಪನ ಮಾತು ವ್ಯಾಸನಿಂದ ಪ್ರೇರಿತನಾಗಿರುವುದನ್ನು ಸ್ಪಷ್ಟಪಡಿಸಿದ್ದಾರೆ.ಈ ಅಭಿಪ್ರಾಯವನ್ನು ಕೆ.ಜಿ.ಕುಂದಣಗಾರ ಮತ್ತು ಚೌಗಲೆಯವರು ತಿರಸ್ಕರಿಸಿ, ಮೇಲಿನ ಪದ್ಯವಾಕ್ಯವನ್ನು "ಸತ್ಕವಿವ್ಯಾಸಸಮಾಗಮಾನ್ವಿತ" ಎಂಬತೆ ಬಿಡಿಸಿ,ಪಂಪ ಹಾಗೂ ವ್ಯಾಸ ಸಮಕಾಲೀನರೂ,ಮಿತ್ರರೂ ಆಗಿದ್ದರೆಂದು ತಿಳಿಸಿರುವುದು ಹಾಸ್ಯಾಸ್ಪದವಾಗಿದೆ. ಮುಂದುವರಿದು ಪಂಪಕವಿಪ್ರಶಸ್ತಿಯನ್ನು ಆತನ ಪದ್ಯಗಳಿಂದಲೇ ಕಟ್ಟಿಕೊಡುವ ಪ್ರಯತ್ನಮಾಡಿದ್ದಾರೆ. ಪಂಪನ ಕಾವ್ಯಮಾರ್ಗವನ್ನು ಅನುಸರಿಸಿದ ಕನ್ನಡಕವಿಗಳ ಪಟ್ಟಿಯನ್ನು ಕೊಟ್ಟಿದ್ದಾರೆ. ಪಮಪನ ಕಾವ್ಯಪ್ರೌಢಿಮೆಯ ಮೇಲೆ ಅವನ ಪದ್ಯಗಳ ಮೂಲಕ ಬೆಳಕು ಚೆಲ್ಲುವ ಪ್ರಯತ್ನಮಾಡಿರುವುದು ಪ್ರಶಂಸನೀಯವಾಗಿದೆ. ಪಂಪನು 'ಆದಿಪುರಾಣಂ'ದಲ್ಲಿ ಬಳಕೆಮಾಡಿರುವ ಛಂದಸ್ಸನ್ನು ಸೂಕ್ಷ್ಮವಾಗಿ ಅವಲೋಕಿಸಿ ಸಂಸ್ಕೃತದ ವೃತ್ತ ಹಾಗೂ ಅವುಗಳ ಬಗೆ, ಮತ್ತು ಕಂದಗಳನ್ನು ಗುರುತಿಸಿರುವುದು ಮೆಚ್ಚತಕ್ಕ ಅಂಶವಾಗಿದೆ. (ಕನ್ನಡ ಛಂದಸ್ಸಿನ ಬಗ್ಗೆ ಈ ಹಿಂದೆ ಹೊರಬಂದ ಕನ್ನಡ ಕೈಪಿಡಿಯ ನೆರವನ್ನು ಪಡೆದು) ಇದರೊಂದಿಗೆ ಜೈನಪಾರಿಭಾಷಿಕ ವಿಚಾರವಾಗಿ ಭವಾವಳಿಗಳು, ಗುಣಸ್ಥಾನಗಳನ್ನು ಸವಿವರವಾಗಿ ತಿಳಿಸಲಾಗಿದೆ. ಇದರ ಜೊತೆಗೆ ೩೦ ಪುಟಗಳಷ್ಟು ವಿಸ್ತಾರವಾಗಿ ಕಥಾಸಾರವನ್ನು ಆಶ್ವಾಸಾನುಕ್ರಮದಲ್ಲಿ ನೀಡಲಾಗಿದೆ. ಗ್ರಂಥಾಂರಂಭದಲ್ಲಿಯೇ ೮ ಪುಟಗಳಷ್ಟು ದೀರ್ಘವಾದ ಒಪ್ಪೋಲೆಯನ್ನು ಕೊಡಲಾಗಿದೆ. ಉಳಿದಂತೆ 'ಆದಿಪುರಾಣಂ'ದ ೧೬ ಆಶ್ವಾಸಗಳನ್ನು ಅನುಕ್ರಮವಾಗಿ ಕೆಲವು ಶುದ್ಧಪಾಠದೊಂದಿಗೆ ಜೋಡಿಸಲಾಗಿದೆ. ಗ್ರಂಥಾಂತ್ಯದಲ್ಲಿ ಹೆಚ್ಚಿನ ಮಾಹಿತಿಗಾಗಿ ೫ ಅನುಬಂಧಗಳನ್ನು ನೀಡಲಾಗಿದೆ. ಅನುಬಂಧ ೧ ರಲ್ಲಿ 'ಆದಿಪುರಾಣನಾಮ ಪದಕೋಶ' ಎಂಬ ಶೀರ್ಷಿಕೆಯಡಿ ಕೃತಿಯಲ್ಲಿ

---

* ಮಾಘಣಂದ್ಯಾಚಾರ್ಯನು ಜೈನಧರ್ಮಕ್ಕೆ ಮತಾಂತರ ಹೊಂದಿದ ಧಾರ್ಮಿಕ ಮುಖಂಡ

ಬರುವ ಹೆಸರುಗಳನ್ನು ಅಕಾರಾದಿಯಾಗಿ ಮಾಡಿ ಅವುಗಳ ಸಂಬಂಧಗಳ ವಿವರವನ್ನು ನೀಡಲಾಗಿದೆ. ಅನುಬಂಧ ೨ ರಲ್ಲಿ ಜೈನಪಾರಿಭಾಷಿಕ ಪದಗಳನ್ನು ಆದ್ಯಾಕ್ಷರ ಕ್ರಮವಾಗಿ ಜೋಡಿಸಿ, ಅವು ಬಳಕೆಯಾಗಿರುವ ಆಶ್ವಾಸ-ಪದ್ಯಗಳ ಸಂಖ್ಯೆಯನ್ನು ಕೊಡಲಾಗಿದೆ. ಅನುಬಂಧ ೩ ರಲ್ಲಿ ಕೃತಿಯಲ್ಲಿರುವ ಕಠಿಣಪದಗಳಿಗೆ ಅರ್ಥನೀಡಲಾಗಿದೆ. ಅನುಬಂಧ ೪ ರಲ್ಲಿ ಕೃತಿಯೊಳಗೆ ಬಳಕೆಯಾಗಿರುವ ಸುಮಾರು ೨೦ ಸಂಸ್ಕೃತವೃತ್ತಗಳನ್ನು ಪಟ್ಟಿಮಾಡಿ, ಅವುಬಳಕೆಗೊಂಡಿರುವ ಪದ್ಯದ ಪಾದಗಳನ್ನು ನಿರ್ದಿಷ್ಟ ಸಂಖ್ಯಾಸೂಚಿಗಳ ಮೂಲಕ ನಿರ್ದೇಶಿಸಲಾಗಿದೆ. ೫ ನೆಯ ಅನುಬಂಧ ಕೃತಿಯಲ್ಲಿನ ಪದ್ಯಗಳ ಅಕಾರಾದಿ ಪಟ್ಟಿಕೊಟ್ಟು, ಅವು ಬಳಕೆಯಾಗಿರುವ ಎಡೆಯಲ್ಲಿ ನಿರ್ದಿಷ್ಟ ಸಂಖ್ಯಾಸೂಚಿಯೊಂದಿಗೆ ತಿಳಿಸಲಾಗಿದೆ. ಹೀಗೆ ಆದಷ್ಟೂ ಶಾಸ್ತ್ರೀಯದೃಷ್ಟಿಯಿಂದ ಹಾಗೂ ಪ್ರಾಮಾಣಿಕವಾಗಿ 'ಆದಿಪುರಾಣ'ವನ್ನು ಪರಿಷ್ಕರಿಸಿ ಸಂಪಾದಿಸಿರುವ ಕೆ.ಜಿ.ಕುಂದಣಗಾರ ಹಾಗೂ ಎ.ಪಿ.ಚೌಗಲೆಯವರ ಈ ಪ್ರಯತ್ನ ಸ್ಮರಿಸಬಹುದಾದ ದಾಖಲೆಯಾಗಿದೆ.

ಈ ಮೇಲಿನ ಎರಡೂ ಪ್ರಕಟಪ್ರತಿಗಳಲ್ಲಿ ಅಸ್ಪಷ್ಟತೆ ಹಾಗೂ ದೋಷಗಳು ಇದ್ದಕಾರಣ, ಎಲ್.ಬಸವರಾಜು ಅವರು 'ಆದಿಪುರಾಣ'ವನ್ನು ಪರಿಷ್ಕರಿಸುವ ಕಾರ್ಯಕ್ಕೆಗೊಂಡರು.

ಎಲ್.ಬಸವರಾಜು ಅವರು ಗ್ರಂಥಾಂರಂಭದಲ್ಲಿ ಪಂಪಕವಿ ಹಾಗೂ ಆತನ ಕೃತಿಗಳನ್ನು ಕುರಿತು ಚರ್ಚಿಸಿದ್ದು, ಪಂಪನ ಲೌಕಿಕ ಗ್ರಂಥವಾದ 'ವಿಕ್ರಮಾರ್ಜುನ ವಿಜಯಂ'ದಿಂದ ಕನ್ನಟ ಜನರ ಹೃದಯದಲ್ಲಿ ನೆಲೆಗೊಂಡನೇ ವಿನಾ ಆತನ ಆದಿಪುರಾಣದಿಂದಲ್ಲ ಎಂದು ಅಭಿಪ್ರಾಯ; ಅಂದರೆ "ಪಂಪ ಎಷ್ಟೇ ಮಹಾಕವಿಯಾಗಿರಲಿ – ಲೌಕಿಕವೆಂದಾದರೂ ಆ (ಮಹಾ)ಭಾರತವನ್ನು ಬರೆಯದೇ ಹೋಗಿದ್ದರೆ, ಅಥವಾ ಅದಕ್ಕೆ ಬದಲಾಗಿ ಅಷ್ಟೇ ಶಕ್ತಿಯುತವಾಗಿ ಜೈನಧಾರ್ಮಿಕ ಕಾವ್ಯಗಳನ್ನು ಮತ್ತೊಂದಲ್ಲ ನೂರೊಂದು ಬರೆದಿದ್ದರೂ ಅವನನ್ನು ನಮ್ಮ ಜನ ಮಮತೆಯಿಂದ ನೆನೆಯುತ್ತಿರಲಿಲ್ಲವೋ ಎಂದು ಅಳುಕುವುದು. ಅಂಥ ಅಗ್ನಿಪರೀಕ್ಷೆಯ ಪ್ರಸಂಗ ಸುದೈವದಿಂದಾಗಿ ಕನ್ನಡಿಗರಿಗೆ ಒದಗಿ ಬರಲಿಲ್ಲ. ಆದ್ದರಿಂದ ನಾವೆಲ್ಲ ಪರೀಕ್ಷೆಯಿಲ್ಲದೆಯೇ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾಗಿದ್ದೇವೆ, ನಿರಾಯಾಸ ಸಂತೋಷ"[೨] ಎಂದಿರುವುದು ಪ್ರಾಮಾಣಿಕ ಮಾತೇ ಆಗಿದೆ.

ಕನ್ನಡ ಸಂಶೋಧನಾ ಕ್ಷೇತ್ರದಲ್ಲಿ ಬಹಳಷ್ಟು ವಿದೇಶಿ ವಿದ್ವಾಂಸರು ದುಡಿದರೂ, ಅವರಲ್ಲಿ ಮತಪ್ರಚಾರದ ಮೂಲಧ್ಯೇಯವಿದ್ದದ್ದನ್ನು ಮರೆಯಬಾರದು. ಆದರೆ ಮೋಗ್ಲಿಂಗ್, ಕಿಟ್ಟೆಲ್ ಹಾಗೂ ರೈಸ್ ಅವರ ಸಂಶೋಧನಾಕಾರ್ಯ ಇದಕ್ಕೆ ಅಪವಾದವಾಗಿದ್ದು, ಇವರ ಈ ಕಾರ್ಯ ದೇಶೀಯ ವಿದ್ವಾಂಸರಿಗೆ ಹಾದಿ ನಿರ್ಮಿಸಿಕೊಟ್ಟಿರುವುದನ್ನು ಮರೆಯುವಂತಿಲ್ಲ. ವಿದೇಶಿ ವಿದ್ವಾಂಸರ ಈ ಸಾಹಿತ್ಯಕಾರ್ಯದಿಂದ ಅಜ್ಞಾತವಾಗಿದ್ದ ಎಷ್ಟೋ ಪ್ರಾಚೀನಕವಿಗಳು ಬೆಳಕಿಗೆ ಬಂದರು. ಇದರಿಂದ ಪಂಪ ಆದಿಕವಿಯಾಗಿ ಅಂದಿನಿಂದ ಇಂದಿನವರೆಗೆ ಮಧುರಕವಿಯ

---

೨. ಎಲ್.ಬಸವರಾಜು, **ಪಂಪನ ಆದಿಪುರಾಣದ** 'ಅರಿಕೆ', ಗೀತಾ ಬುಕ್‌ಹೌಸ್ ಪ್ರಕಾಶನ ಪ್ರಥಮ ಮುದ್ರಣ ೧೯೭೬, ಪುಟ ಸಂಖ್ಯೆ V

ನುಡಿಯಂತೆ, ಕನ್ನಡಸಾಹಿತ್ಯದ ಹಿರಿಯಣ್ಣನಾಗಿ ಉಳಿದಿರುವುದು ಅವನ ಹಾಗೂ ಆತನ ಕೃತಿಗಳ ಹಿರಿಮೆಗೆ ಹಿಡಿದ ಕನ್ನಡಿಯಾಗಿದೆ.

ಪಂಪನ ಎರಡೂ ಕೃತಿಗಳಲ್ಲಿ ಒಂದು, ಧಾರ್ಮಿಕಪಂಕದಲ್ಲಿ ಹೂತು ಜೈನೇಯರರಿಂದ ತಿರಸ್ಕೃತವಾದರೆ, ಮತ್ತೊಂದು ಲೌಕಿಕಕಾವ್ಯವಾದ್ದರಿಂದ ಜೈನರಿಂ ಸಂಪೂರ್ಣವಾಗಿ ಧಿಃಕೃತವಾಯಿತು. ಹೀಗೆ ಪಂಪನ ಎರಡೂ ಕಾವ್ಯಗಳು ವಿದ್ವಾಂಸರಿಂದ ಅನಾದರಕ್ಕೆ ಗುರಿಯಾಗಿರುವದನ್ನು ಎಲ್.ಬಸವರಾಜು ಅವರು ತಿಳಿಸಿದ್ದಾರೆ. ಮುಂದುವರಿದು - "ಇವನಾರವನಿವನಾರವ" ನೆಂದು ಬಹುಕಾಲ ಸೋಟೆ ತಿವಿಸಿಕೊಂಡಿದ್ದರೂ ಅವು ಬಾಳಿರಿವುದು ಅವುಗಳ ಹೃದಯಾಂತರಾಳದಲ್ಲಿರುವ ಅಮೃತಕಳಶದಿಂದ ಎಂದಿದ್ದಾರೆ. ಹೀಗೆ ಪಂಪನ ಕಾವ್ಯಗಳಿಗೆ ಒದಗಿದ ಸಂಕಷ್ಟವನ್ನು ಎಲ್.ಬಸವರಾಜು ಅವರು ತಮ್ಮ ಗ್ರಂಥಾರಂಭದಲ್ಲಯೇ ತಿಳಿಸುತ್ತಾರೆ. 'ಆದಿಪುರಾಣ' ಜೈನಗ್ರಂಥವಾಗಿದ್ದರೂ ಜೈನರಿಂದ ಅದು ಪ್ರಕಟಗೊಳ್ಳದಿದ್ದರ ಬಗ್ಗೆ ವಿಷಾದಿಸುತ್ತಾರೆ.

ಎಲ್.ಬಸವರಾಜು ಅವರು ಮೊದಲು ಪಂಪನ ಸ್ಥಾನ ಹಾಗೂ ಆತನ ಕೃತಿಗಳಿಗೆ ಒದಗಿಸಿದ ಸಂಕಷ್ಟಗಳನ್ನು ಚರ್ಚಿಸಿದ ತರುವಾಯ, 'ಆದಿಪುರಾಣ'ದ ಪರಿಷ್ಕರಣದ ಕಾರ್ಯವೈಖರಿಯನ್ನು ವಿವರಿಸುತ್ತಾರೆ. ಕ್ರಮವಾಗಿ ೧೯೦೦ ಹಾಗೂ ೧೯೫೩ರಲ್ಲಿ 'ಆದಿಪುರಾಣ'ವು ಎಸ್.ಜಿ.ನರಸಿಂಹಾಚಾರ್ ಹಾಗೂ ಪ್ರೊ .ಕೆ.ಜಿ. ಕುಂದಣಗಾರ ಮತ್ತು ಚೌಗಲೆ ಅವರಿಂದ ಪರಿಷ್ಕೃತವಾಗಿ ಪ್ರಕಟವಾಗಿರುವುದನ್ನು ಈ ಹಿಂದೆಯೇ ತಿಳಿಸಲಾಗಿದೆ. ಎಲ್.ಬಸವರಾಜು ಅವರು ಹೇಳಿರುವಂತೆ ಎಸ್.ಜಿ.ನರಸಿಂಹಾಚಾರ್‌ರು ಬಳಸಿದ್ದ ೪ ಪ್ರತಿಗಳಲ್ಲಿ ಒಂದನ್ನು ಮೂಲವಾಗಿಟ್ಟುಕೊಂಡು ಮತ್ತೊಂದನ್ನು ತಪ್ಪಿದೆನಿಸಿದೆಡೆಗಳಲ್ಲಿ ಮಿಕ್ಕ ಮೂರು ಪ್ರತಿಗಳನ್ನು ಬಳಸಿಕೊಂಡರು. ಪಾಠಾಂತರಗಳನ್ನು ಅಡಿಟಿಪ್ಪಣಿಯಲ್ಲಿ ಕೊಟ್ಟರು. ಕೆ.ಜಿ.ಕುಂದಣಗಾರ ಹಾಗೂ ಎ.ಪಿ.ಚೌಗಲೆ ಅವರು ಮೂಡಬಿದರೆ ಜೈನಮಠದ ಶ್ರುತಭಂಡಾರದ ೨ ಪ್ರತಿಗಳ ಸಹಾಯದಿಂದ ಪರಿಷ್ಕರಣಕಾರ್ಯ ನಡೆಸಿದರು. ಈ ಎರಡು ಪ್ರತಿಗಳಲ್ಲಿ ಒಂದು,'ತಕ್ಕಮಟ್ಟಿಗೆ ಶುದ್ಧ', ಮತ್ತೊಂದು 'ದೋಷಪೂರಿತ' ಎಂದಿದ್ದಾರೆ. "ಈ ಎರಡೂ ಪ್ರತಿಗಳ ಕರ್ತೃವಾಗಲಿ, ಕಾಲವಾಗಲಿ ತಿಳಿಯದು(ಇದೇ ಮಾತು ಎಸ್.ಜಿ.ನರಸಿಂಹಾಚಾರ್ ರು ಬಳಸಿಕೊಂಡಿರುವ ಪ್ರತಿಗಳಿಗೂ)"ಅರ್ಥ,ಛಂದಸ್ಸು,ಉಪಮೆ,ಬಂಧ ಮುಂತಾದ ವಿಷಯಗಳಿಗೆ ಸರಿಹೋಗುವ ಪಾಠಗಳನ್ನು ಇರಿಸಿಕೊಂಡು ಮಿಕ್ಕಪಾಠಗಳನ್ನು ಅಡಿಟಿಪ್ಪಣಿಯಲ್ಲಿ ಕೊಡಲಾಗಿದೆ"ಯೆಂದೂ, ಹಾಗೆಯೇ ಎಸ್.ಜಿ.ಎನ್ ರ ಪರಿಷಕರಣದ ಪಾಠಾಂತರಗಳನ್ನೂ ಗಮನಿಸಲಾಗಿದೆಯೆಂದೂ, ವ್ಯಾಕರಣ ದೋಷಗಳುಳ್ಳ ಪಾಠಗಳನ್ನೂ ಅನಾವಶ್ಯಕವೆನಿಸಿದ ಪಾಠಗಳನ್ನೂ ಬಿಟ್ಟುಬಿಟ್ಟಿದೆ" ಎಂದೂ ಕೆ.ಜಿ.ಕುಂದಣಗಾರರು ಹೇಳಿಕೊಂಡಿರುವರು. ಈ ಸಂಪಾದಕರು ಹೇಳುವ ಇಂತಹ ಮಾತನ್ನೆಲ್ಲಾ ನೋಡಿದರೆ-ಅವರ ಗ್ರಂಥಸಂಪಾದನಾಕಾರ್ಯ ದೋಷಯುಕ್ತವಾಗಿದೆ ಎಂದೆನಿಸುತ್ತದೆ. ಮೊದಲನೆಯದಾಗಿ ಅವರು (ಎಸ್.ಜಿ.ಎನ್ ಉಪಯೋಗಿಕೊಂಡಿರುವುದಕ್ಕಿಂತ ಹೊರತಾಗಿ) ಉಪಯೋಗಿಸಿಕೊಂಡಿರುವ (ಮೂಡಬಿದರೆಯ ಎರಡು)ಪ್ರತಿಗಳಲ್ಲಿ ಯಾವುದೊಂದನ್ನು ತಮ್ಮ ಪರಿಷ್ಕರಣಕ್ಕೆ ಮೂಲವಾಗಿಟ್ಟುಕೊಳ್ಳದೆ, ಎಸ್.ಜಿ.ಎನ್ ರ ಗ್ರಂಥವನ್ನೇ ಮೂಲಪಾಠವಾಗಿಟ್ಟುಕೊಂಡಿರುವುದರಿಂದ, ಎರಡನೆಯದಾಗಿ ಗ್ರಂಥದ ಕೆಲವು (ಮೂಲ)ಪಾಠಗಳನ್ನು ಸ್ವಚ್ಛಂದವಾಗಿ ಅನಾವಶ್ಯಕವೆಂದು ಕೈಬಿಟ್ಟಿರುವುದರಿಂದ, ಮೂರನೆಯದಾಗಿ ಬಳಸಿಕೊಂಡ ಪ್ರತಿಗಳಲ್ಲಿ ಇವು ಇತ್ತೀಚಿನ ಕಾಲದವು, ಇವು ಪ್ರಾಚೀನ ಕಾಲದವು ನಿಗದಿಪಡಿಸಿಕೊಳ್ಳದೆ- ಸಿಕ್ಕಿದ ಪ್ರತಿಗಳಲ್ಲಿ ಸೇರ್ಪಡೆಯಾಗಿರುವ ಪ್ರಕ್ಷಿಪ್ತಭಾಗಗಳನ್ನು

ಪಾಠವಾಗಿ ಸ್ವೀಕರಿಸಿರುವುದರಿಂದ- ಕೆ.ಜಿ.ಕುಂದಣಗಾರರ 'ಆದಿಪುರಾಣ' ಪರಿಷ್ಕರಣವು ಮಿಶ್ರಪಾಠದಿಂದಲೂ, ನ್ಯೂನಪಾಠದಿಂದಲೂ, ಅಧಿಕಪಾಠದಿಂದಲೂ ಕಲುಷಿತಗೊಂಡಿದೆ. ಎಸ್.ಜಿ.ಎನ್.ರ ಪರಿಷ್ಕರಣದಲ್ಲಿ ಪಾಠದೃಷ್ಟಿಯಿಂದ ಇಂಥ ನ್ಯಾನಾತೀರೇಕಗಳಿರುವುದಾದರೂ, ೧೯೦೦ ರಷ್ಟು ಹಿಂದಿನ ಕಾಲದಲ್ಲಿ 'ಆದಿಪುರಾಣ'ದ ಸಾಕಷ್ಟು ಪ್ರತಿಗಳ ಮಾಹಿತಿಯೂ ಇಲ್ಲದೆ,ಇದ್ದವುಗಳನ್ನು ಬಳಸಿಕೊಳ್ಳಲುಬೇಕಾದ ನಿಷ್ಕೃಷ್ಟ ಶಾಸ್ತ್ರೀಯ ವಿಧಾನಗಳು ಪ್ರಚುರವಾಗದೆ ಇದ್ದುದು ಆ ದೋಷಗಳಿಗೆ ಕಾರಣವಾಗಿದೆ. ಆದರೆ ಸಂಪಾದನಾಶಾಸ್ತ್ರವು ಭಾರತದಲ್ಲಿ ಪ್ರಚಲಿತವಾಗಿದ್ದ ೧೯೫೩ ರಷ್ಟು ಇತ್ತೀಚಿನ ಕಾಲದಲ್ಲಿ ಪರಿಷ್ಕರಣ ಕಾರ್ಯವನ್ನು ಕೈಗೆತ್ತಿಕೊಂಡ ಕುಂದಣಗಾರರು - ಮೂಡಬಿದರೆಯಲ್ಲಿ, ಶ್ರವಣಬೆಳಗೊಳದಲ್ಲಿ, ಕಾರ್ಕಳದಲ್ಲಿ- ಅಷ್ಟೇ ಏಕೆ ಬಸದಿ ಬಸದಿಗಳಲ್ಲಿದ್ದ 'ಆದಿಪುರಾಣ'ದ ಪ್ರತಿಗಳನ್ನು ಪರೀಕ್ಷಿಸದೆ - ಅವುಗಳೊಳಗಿಂದ ಮೂಲವಾಗಿಟ್ಟುಕೊಳ್ಳಲು ಉತ್ತಮವೆಂದು ಒಂದು ಪ್ರತಿಯನ್ನಾದರೂ ನಿರ್ಧರಿಸಿಕೊಳ್ಳಲಾಗದೇ ಹೋದದು ತರವಲ್ಲ"[೩] ಎಂದು ಹಿಂದಿನ ಎರಡೂ ಆವೃತ್ತಿಗಳ ದೋಷಗಳನ್ನು ವಿವರಿಸುತ್ತಾರೆ. ಮುಂದುವರಿದು ತಮ್ಮ ಈ ಪರಿಷ್ಕರಣಕಾರ್ಯಕ್ಕಾಗಿ ಬಳಸಿಕೊಂಡಿರುವ ಹಸ್ತಪ್ರತಿಗಳನ್ನು ಪಟ್ಟಿಹಾಕಿ, ಅದರ ಸ್ವರೂಪವಿನ್ಯಾಸವನ್ನು ದರ್ಶಿಸುತ್ತಾರೆ.

ಎಲ್.ಬಸವರಾಜು ಅವರು 'ಆದಿಪುರಾಣ'ದ ಪರಿಷ್ಕರಣಕಾರ್ಯಕ್ಕಾಗಿ (ಹಿಂದಿನ ಪ್ರತಿಗಳನ್ನು ಹೊರೆತುಪಡಿಸಿ) ಸುಮಾರು ೧೦ ಹಸ್ತ ಹಾಗೂ ಕಾಗದದ ಪ್ರತಿಗಳನ್ನು ಆಧಾರವಾಗಿಟ್ಟುಕೊಂಡಿವುದಾಗಿ ತಿಳಿಸಿ, ಅವುಗಳ ರೂಪರೇಷೆಯನ್ನು ತಿಳಿಸಿದ್ದಾರೆ. ಇದರೊಂದಿಗೆ 'ಆದಿಪುರಾಣ'ದ ಉಲ್ಲೇಖಗಳಿರಿವ ಕೆಲವು ಆಕರಗ್ರಂಥಗಳನ್ನು ಹಾಗೂ ಸಂಸ್ಕೃತದ

ಜಿನಾಸೇನಾಚಾರ್ಯ ಮತ್ತು ಗುಣಭದ್ರಚಾರ್ಯರ 'ಮಹಾಪುರಾಣ'ವನ್ನು* ತಾಳೆನೋಡಿ ಸಿದ್ಧಪಡಿಸಿರುವುದಾಗಿ ಹೇಳಿದ್ದಾರೆ. ಇವುಗಳಲ್ಲಿ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ನಲ್ಲಿರುವ "ಹ" ಎಂಬ ಅಂಕಿತದ ಓಲೆಪ್ರತಿ, ಅತ್ಯಂತ ಪ್ರಾಚೀನವಾಗಿದ್ದು, ಇದನ್ನೇ ಮೂಲವಾಗಿಟ್ಟುಕೊಂಡು ಪರಿಷ್ಕರಣ ಮಾಡಿರುವುದಾಗಿ ಹೇಳಿದ್ದಾರೆ. ಅಂದರೆ ಈ ಓಲೆಪ್ರತಿಯ ಕಾಲ ಕ್ರಿ.ಶ. ೨೧-೧೦-೧೩೪೯, ಆದ್ದರಿಂದ ಇದೇ ಮೂಲಕ್ಕೆ ಹತ್ತಿರವಾದುದೆಂದು ನಿರ್ಧರಿಸಿ ಮೂಲವಾಗಿಟ್ಟುಕೊಂಡಿದ್ದಾರೆ. ಇದಕ್ಕಿಂತ ಹಿಂದಿನ ಪ್ರತಿ ಸಿಕ್ಕರೆ ಮತ್ತಷ್ಟು ಪರಿಷ್ಕರಿಸಬಹುದು ಎಂತಲೂ ತಿಳಿಸಿದ್ದಾರೆ.ಆದರೆ ಇದಕ್ಕಿಂತ ಹಿಂದಿನ ಓಲೆಪ್ರತಿ ಇಂದಿಗೂ ದೊರೆತಿಲ್ಲ. ಇದರಿಂದ ಇಂದಿಗೂ ಎಲ್.ಬಸವರಾಜು ಅವರು ಪರಿಷ್ಕರಿಸಿದ 'ಆದಿಪುರಾಣ'ವೇ ಶುದ್ಧಪರಿಷ್ಕರಣ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಕೊನೆಯದಾಗಿ ಅರಿಕೆಯಲ್ಲಿ ಎಲ್.ಬಸವರಾಜು ಅವರು ತಾವು ಹಾಗೂ ಹಿಂದಿನ ಸಂಪಾದಕರು ಬಳಸಿಕೊಂಡಿದ್ದ ಎಲ್ಲಾ ಪ್ರತಿಗಳ ಸಂಪ್ರದಾಯ-ಸಂಬಂಧವನ್ನು ಪ್ರಾಚೀನತೆ-ಅರ್ವಾಚೀನತೆ ದೃಷ್ಟಿಯಿಂದ ವಿಂಗಡಿಸಿ ಅದನ್ನು ರೇಖಾವಿನ್ಯಾಸದ ಮೂಲಕ ಸ್ಪಷ್ಟವಾಗಿ ದರ್ಶಿಸಿದ್ದಾರೆ.

ಗ್ರಂಥದಲ್ಲಿ ಷೋಡಶಾಶ್ವಾಸಗಳನ್ನು ಅನುಕ್ರಮವಾಗಿ ಶಾಸ್ತ್ರೀಯವಾಗಿ ಸಂಪಾದಿಸಲಾಗಿದೆ. ಇಲ್ಲಿ ಮೂಲಪದ್ಯ ಭಾಗದ ನಡುವೆ ಪದ್ಯವಿಷಯವನ್ನು ನಿರ್ದೇಶಿಸಲು ಉಪಶೀರ್ಷಿಕೆ ನೀಡಿರುವುದು ಹಾಗೂ ಪದ್ಯಗಳನ್ನು ಅರ್ಥಾನುಸಾರಿಯಾಗಿ ಪದಚ್ಛೇದ ಮಾಡಿಕೊಟ್ಟಿರುವುದು

--------------------

೩. ಎಲ್.ಬಸವರಾಜು, **ಪಂಪನ ಆದಿಪುರಾಣದ** 'ಅರಿಕೆ', ಗೀತಾ ಬುಕ್‌ಹೌಸ್ ಪ್ರಕಾಶನ ಪ್ರಥಮ ಮುದ್ರಣ ೧೯೭೬, ಪುಟ vii-viii

* ಜಿನಾಸೇನಾಚಾರ್ಯರ ಪೂರ್ವಪುರಾಣ + ಗುಣಭದ್ರಚಾರ್ಯರ ಉತ್ತರಪುರಾಣ = ಮಹಾಪುರಾಣ

ವಿಶೇಷವಾಗಿವೆ. ಇವು ಓದುಗರಿಗೆ ಸುಲಭವಾಗಿ ಅರ್ಥವಾಗುವುದರೊಂದಿಗೆ ಕಾವ್ಯೋದ್ದೇಶವನ್ನು ತಿಳಿಸುವಲ್ಲಿ ಸಹಕಾರಿಯಾಗಿದೆ. ಎಂದಿನಂತೆ ಪಾಠಾಂತರಗಳನ್ನು ಅಡಿಟಿಪ್ಪಣಿಯಲ್ಲಿ ನೀಡಲಾಗಿದೆ. ಕೆಲವೆಡೆ ಪಾಠಗಳನ್ನು ಕುರಿತು ಚರ್ಚಿಸಿರುವುದು ಕಂಡುಬರುತ್ತದೆ. ಜೈನಪಾರಿಭಾಷಿಕತೆಗಳು ಬಂದೆಡೆಗಳಲ್ಲಿ ಸಂದರ್ಭೋಚಿತವಾಗಿ ಕೆಲವು ಟಿಪ್ಪಣಿಗಳನ್ನು ನೀಡಲಾಗಿದೆ. ಇದು ಗ್ರಂಥಸಂಪಾದನಾ ಕ್ಷೇತ್ರದಲ್ಲಿಯೇ ಮಹತ್ವದ ಹೆಜ್ಜೆ ಎಂಬುದನ್ನು ಮರೆಯುವಂತಿಲ್ಲ.

ಎಲ್.ಬಸವರಾಜು ಅವರ ಈ ಪರಿಷ್ಕರಣಕಾರ್ಯದ ಬಗ್ಗೆ ಟಿ.ವಿ.ವೆಂಕಟಾಚಲಶಾಸ್ತ್ರೀ ಗಳು ಹೀಗೆಂದಿದ್ದಾರೆ: "ಎಲ್.ಬಸವರಾಜು ಅವರು ತುಂಬ ಶ್ರಮವಹಿಸಿ ಆದಿಪುರಾಣವನ್ನು ಹೊಸದಾಗಿ ಪರಿಷ್ಕರಿಸಿದ್ದು (೧೯೭೬), ಇದು ಕುಂದಣಗಾರರ ಪರಿಷ್ಕರಣದಿಂದ ಈಚೆಗೆ ಇನ್ನೊಂದು ಮುನ್ನಡೆಯ ಘಟ್ಟವಾಗಿದೆ. ಇಲ್ಲಿ ಮೊದಲಸಲ 'ಆದಿಪುರಾಣ'ದ ಸಂಪಾದನೆಗೆ ಹೆಚ್ಚಿನ ಹಸ್ತಪ್ರತಿಗಳನ್ನು ಬಳಸಿದೆ; ಪಾಠನಿಷ್ಕರ್ಷೆಗೆ 'ಆದಿಪುರಾಣ'ದ ಲಕ್ಷ್ಯಪದ್ಯಗಳನ್ನು ಒಳಗೊಂಡ ಪ್ರಾಚೀನ ಕನ್ನಡ ಲಕ್ಷಣಗ್ರಂಥಗಳನ್ನೂ ಕಾವ್ಯಸಂಕಲನದಿಂದ ಗ್ರಂಥಗಳನ್ನೂ ಲಕ್ಷಿಸಿದೆ; 'ಪೂರ್ವಪುರಾಣ'ದ ಸಹಾಯವನ್ನು ಪಡೆದಿದೆ. ತೇದಿಯ ದೃಷ್ಟಿಯಿಂದ ಅತಿಪ್ರಾಚೀನವಾದ್ದೆಂದು ತಿಳಿಯುವ (೧೩೮೯) ಹಸ್ತಪ್ರತಿಯನ್ನು ಆಧಾರಪ್ರತಿಯಾಗಿಟ್ಟುಕೊಂಡು ಉಳಿದವನ್ನು ಯಥೋಚಿತವಾಗಿ ಬಳಸುವ ಕ್ರಮವನ್ನು ಅನುಸರಿಸಿದೆ. ಇವೆಲ್ಲ ಶ್ಲಾಘ್ಯವಾದ ಪರಿಕ್ರಮಗಳು. ಇವುಗಳಿಂದಾಗಿ ಹೊಸದಾಗಿಯೇ ಪಾಠಸಂಕಲನವಾಗಿದೆ; ಪಾಠಸ್ವರೂಪ ಹೊಸತುಗೊಂಡಿದೆ; ಹೆಚ್ಚು ಸುಧಾರಿತವಾಗಿದೆ. ಅಲ್ಲಲ್ಲಿ ಪಾಠನಿಷ್ಕರ್ಷೆ ಪೂರ್ತಿಯಾಗಿ ತೃಪ್ತಿಕೊಡದಿರಬಹುದು; ಭಿನ್ನಾಭಿಪ್ರಾಯಗಳಿಗೆ ಅವಕಾಶವಿರಬಹುದು: ಆದರೆ ಅಲವೆಡೆ ಉತ್ತಮ ಪಾಠಗಳು ನಿಸ್ಸಂಶಯವಾಗಿ ಸಂಯೋಜನೆಗೊಂಡಿವೆ".[೪] ಈ ಮಾತುಗಳು ಎಲ್,ಬಸವರಾಜು ಅವರ ಪರಿಷ್ಕೃತ ಕೃತಿಯ ಮೌಲ್ಯಕ್ಕೆ ನಿದರ್ಶನವಾಗಿವೆ.

ಈ ಆವೃತ್ತಿಯ ಪ್ರಕಟಣೆಯ ತರುವಾಯ ಕನ್ನಡಸಾಹಿತ್ಯ ಪರಿಷತ್ತು, ಕೆ.ಎಲ್.ನರಸಿಂಹಶಾಸ್ತ್ರಿ ಹಾಗೂ ಎನ್.ರಂಗನಾಥಶರ್ಮ ಅವರ ಸಂಪಾದಕತ್ವದಲ್ಲಿ ೧೯೮೦ ರಲ್ಲಿ 'ಆದಿಪುರಾಣ'ದ ಪರಿಷ್ಕರಣಕಾರ್ಯ ಮಾಡಿಸಿತು. ಈ ಪರಿಷ್ಕರಣಕಾರ್ಯ ಸಾಮಾನ್ಯ ಅಭ್ಯಾಸಿಗಳಿಗಾಗಿ ಸಿದ್ಧವಾದ ಕಾರಣ, ವಿರಳವಾಗಿ ಹೊರತು ಪಾಠಾಂತರವನ್ನು ನಿರ್ದೇಶಿಸಿಲ್ಲ. ಜೊತೆಗೆ ಸಂಪಾದಕರಿಬ್ಬರೂ ಸಂಸ್ಕೃತವಿದ್ವಾಂಸರಾದ ಕಾರಣ,'ಆದಿಪುರಾಣ'ದಲ್ಲಿನ ಸಂಸ್ಕೃತಶಬ್ದಗಳ ಹಾಗೂ ಸಮಾಸಗಳ ಶಾಸ್ತ್ರೀಯ ವಿವರಣೆಯನ್ನು ಹಾಗೂ ಪಾರಿಭಾಷಿಕ ಶಬ್ದಗಳ ವಿವರಣೆಯನ್ನು ಸೇರಿಸಲಾಗಿದೆ.

೧೯೯೧ ರಲ್ಲಿ ತ.ಸು.ಶಾಮರಾಯರು ಮತ್ತು ಹಂ.ಪ.ನಾಗರಾಜಯ್ಯನವರು ಸಿದ್ಧಪಡಿಸಿದ 'ಆದಿಪುರಾಣದೀಪಿಕೆ'ಯಲ್ಲಿ ಮೂಲಕೃತಿಯೊಂದಿಗೆ ಟೀಕೆ-ಟಿಪ್ಪಣಿಗಳನ್ನೂ, ಪ್ರತಿಪದಾರ್ಥವನ್ನೂ ನೀಡಲಾಗಿದೆ.ಈ ಬೃಹತ್ ಗ್ರಂಥ ಮೊದಲಿನ ಮುದ್ರಿತ ಪರಿಷ್ಕರಣಗಳಿಂದ ಉತ್ತಮವಾದ ಪರಿಷ್ಕರಣವಾಗಿದೆ.ಮೂಲದ ಅಭ್ಯಾಸದ ಸುಗಮತೆಗೆ ಇದೊಂದು ಮಾರ್ಗದರ್ಶಿ ಕೃತಿಯಾಗಿದೆ.

---

೪. ಟಿ.ವಿ.ವೆಂಕಟಾಚಲಶಾಸ್ತ್ರಿ, ಪರಿಷ್ಕೃತ ಮುದ್ರಣ, **ಆದಿಪುರಾಣಂ** 'ಸಂಪಾದಕರ ಮಾತು' ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೫ ಪುಟ ಸಂಖ್ಯೆ : ix-x

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ 'ಜನಪ್ರಿಯ ಪ್ರಾಚೀನ ಸಾಹಿತ್ಯ ಮಾಲೆ' ಯಲ್ಲಿ ಪಂಪನ ಎರಡೂ ಕೃತಿಗಳನ್ನು ಪ್ರಕಟಿಸುವ ಯೋಜನೆ ರೂಪಿಸಿತು.ಇದರ ಫಲವಾಗಿ ೧೯೬೫ ರಲ್ಲಿ ಟಿ.ವಿ.ವೆಂಕಟಾಚಲಶಾಸ್ತ್ರೀ ಅವರ ಸಂಪಾದಕತ್ವದಲ್ಲಿ, ಈ ಹಿಂದೆ ಎಸ್.ಜಿ.ಎನ್. ಪರಿಷ್ಕರಿಸಿದ್ದ ಪ್ರಕಟಣೆಯನ್ನು ಪುನಃ ಪರಿಷ್ಕರಣೆಮಾಡಿ ಪ್ರಕಟಿಸಿತು. ಕೃತಿಗೆ ಹೊಸ ಪೀಠಿಕೆ, ಕವಿಕಾವ್ಯವಿಚಾರ, ಸಂಕ್ಷಿಪ್ತ ಕಥಾಸಾರ,ಗ್ರಂಥಾಂತ್ಯದಲ್ಲಿ ಅರ್ಥಕೋಶ, ಪದ್ಯಗಳ ಅಕಾರಾದಿಸೂಚಿ, ಅಭ್ಯಾಸಸೂಚಿಯೊಂದಿಗೆ, ಈ ಹಿಂದಿನ ಎಲ್ಲ ಪರಿಷ್ಕರಣಗಳ ಉತ್ತಮಾಂಶಗಳನ್ನು ಸ್ವೀಕರಿಸಿ ಸಿದ್ಧಪಡಿಸಿದ ಕಾರಣ ಇದೊಂದು ಉತ್ತಮ ಪರಿಷ್ಕರಣ ಎನ್ನುವುದರಲ್ಲಿ ಸಂದೇಹವಿಲ್ಲ.

ಈ ಮೇಲಿನ ಎಲ್ಲ ಪರಿಷ್ಕರಣಗಳಲ್ಲಿ ಒಂದಕ್ಕಿಂತ ಒಂದು ಸುಧಾರಣೆ ಕಂಡುಕೊಳ್ಳುವ ಪ್ರಯತ್ನ ಕಾಣಬರುತ್ತದೆಯಾದರೂ ಎಲ್ಲ ಪರಿಷ್ಕರಣಗಳಿಗಿಂತ ಎಲ್.ಬಸವರಾಜು ಅವರ ಪರಿಷ್ಕೃತ 'ಆದಿಪುರಾಣ' ಇಂದಿಗೂ ಎಲ್ಲ ಪರಿಷ್ಕರಣ ಪ್ರಕಟಣೆಗಳಿಗೂ ಮಾದರಿಯಾಗಿರುವುದು ನಿಸ್ಸಂದೇಹದ ಮಾತು.'ಆದಿಪುರಾಣ'ದ ಈ ಆವೃತ್ತಿ ಸಂಪಾದನ ಕ್ಷೇತ್ರದಲ್ಲಿಯೇ ವಿಶಿಷ್ಟಸ್ಥಾನ ಪಡೆದುಕೊಂಡಿದೆ. ಎಲ್.ಬಸವರಾಜು ಅವರ ಈ ಕಾರ್ಯ ಅವಿಸ್ಮರಣೀಯವಾಗಿದೆ.

---

ಈ ಪುಟದಲ್ಲಿನ ೧ ಮತ್ತು ೨ನೆ ಪ್ಯಾರಾದಲ್ಲಿನ ಮೂಲ ಸಾಮಗ್ರಿಗೆ ಆಧಾರ ಟಿ.ವಿ.ವೆಂಕಟಾಚಲಶಾಸ್ತ್ರಿ ಅವರು ಸಂಪಾದಿಸಿದ 'ಪಂಪಕವಿವಿರಚಿತ ಆದಿಪುರಾಣಂ'





# ಕನ್ನಡ ಛಂದಸ್ಸಂಪುಟ

ನಾಗವರ್ಮನ 'ಛಂದೋಂಬುಧಿ'
ಅಭಿನವ ಕೇಶಿರಾಜ ಈಶ್ವರನ 'ಕವಿಜಿಹ್ವಾಬಂಧನ'
ಗುಣಚಂದ್ರನ 'ಛಂದಸ್ಸಾರ'
ವೀರಭದ್ರನ 'ನಂದಿಛಂದೋರ್ಣವ'

ಸಂಸ್ಕೃತ ಪೂರ್ಣಪಾಠ, ನಿರ್ದೇಶನ, ವ್ಯಾಖ್ಯಾನ,
ಟಿಪ್ಪಣಿ, ಪ್ರಸ್ತಾರ, ಸಂದರ್ಭಸಾಮಗ್ರಿ ಮತ್ತು
ಅನುಬಂಧಗಳೊಡನೆ

ಸಂಪಾದಕ
ಡಾ. ಎಲ್. ಬಸವರಾಜು



## ೨. ಕನ್ನಡ ಛಂದಸ್ಸಂಪುಟ

ಕನ್ನಡ ಸಾಹಿತ್ಯಚರಿತ್ರೆಯಲ್ಲಿ ಬೆರಳಿಕೆಯಷ್ಟು ಶಾಸ್ತ್ರಸಂಬಂಧಿತ ಕೃತಿಗಳು ರಚಿತವಾಗಿವೆ. ಅದರಲ್ಲಿ ಛಂದಶ್ಶಾಸ್ತ್ರಕ್ಕೆ ಸಂಬಂಧಿಸಿರುವುದು ಕೆಲವು ಮಾತ್ರ. ಛಂದಸ್ಸು ಪ್ರಾಚೀನಕಾಲದಿಂದ ಇಂದಿನವರೆಗೂ ಕಾವ್ಯದ ಅನಿವಾರ್ಯ ಭಾಗವಾದ್ದರಿಂದ ಛಂದಶ್ಶಾಸ್ತ್ರ ಕೃತಿಗಳು ಅಲ್ಲಲ್ಲಿ ರಚಿತವಾದವು. ಅವುಗಳಲ್ಲಿ ನಾಗವರ್ಮನ 'ಛಂದೋಬುಧಿ', ಈಶ್ವರಕವಿಯ 'ಕವಿಜಿಹ್ವಾಬಂಧನ', ಗುಣಚಂದ್ರನ 'ಛಂದಸ್ಸಾರ' ಹಾಗೂ ವೀರಭದ್ರಕವಿಯ 'ನಂದೀಛಂದೋರ್ಣವ' ಮೈಲಿಗಲ್ಲಿನಂತಹ ಕೃತಿಗಳಾಗಿವೆ. ಎಲ್.ಬಸವರಾಜು ಅವರು ಹೇಳುವಂತೆ ಇವು ಕನ್ನಡ ಛಂದಃಕ್ಷೇತ್ರದ ನಾಲ್ಕುಲಿಂಗದ ಕಲ್ಲುಗಳು ಹಾಗೂ ಕನ್ನಡ ಕಾವ್ಯಲೋಕದ ಪದ್ಯಬಂಧಗಳೆಂದ ಭೂಸೇನಾ ವಿಭಾಗದ ನವಜವಾನರ ನಡೆತಿದ್ದಿ ನೀಳವಾಗಿ ನಡೆಸುವ ಲೀಲಾತರಪೇತಿ ಕೇಂದ್ರಗಳು. ಅಲ್ಲದೆ ಛಂದೋಪ್ರಕಾರಗಳ ಆಹ್ಲಾದ-ಪ್ರಹ್ಲಾದಗಳನ್ನು ರಕ್ಷಣೆ-ಪ್ರವರ್ಧನೆಗಾಗಿ ಕವಿಮಹಾನುಭಾವರು ಏರ್ಪಡಿಸಿದ ಲಘುಗುರು ಸೇನಾಪ್ರದರ್ಶನಗಳನ್ನು ಮುಗ್ದ ಸಹೃದಯರಿಗೆ ನಿರೂಪಿಸುವ ವೀಕ್ಷಕ ವಿವರಣೆಗಳೇ ಈ ನಾಲ್ಕು ಛಂದೋಗ್ರಂಥಗಳು.

ಕನ್ನಡ ಛಂದಶಾಸ್ತ್ರಕ್ಕೆ ಅಡಿಗಲ್ಲಾದಂತಹ ಈ ಛಂದೋಗ್ರಂಥಗಳನ್ನು ಪರಿಷ್ಕರಿಸುವ ಕಾರ್ಯ ಕನ್ನಡಸಾಹಿತ್ಯದಲ್ಲಿ ಶತಶತಮಾನಗಳಿಂದ ನಡೆಯುತ್ತಿದ್ದರೂ, ಇದಕ್ಕೊಂದು ಭದ್ರ ಅಡಿಪಾಯ ಹಾಕಿದವರು ವಿದೇಶಿ ವಿದ್ವಾಂಸರುಗಳೇ ಎಂಬುದು ಸತ್ಯಸಂಗತಿ. ಕಿಟ್ಟೆಲ್ ೧೮೭೫ ರಲ್ಲಿ ಮೊದಲಿಗೆ ನಾಗವರ್ಮನ 'ಛಂದೋಬುಧಿ'ಯನ್ನು ಪರಿಷ್ಕರಿಸಿ ಪ್ರಕಟಿಸುವ ಮೂಲಕ ಕನ್ನಡದಲ್ಲಿ ಈ ವಿದ್ವತ್ ಕಾರ್ಯಕ್ಕೆ ನಾಂದಿಹಾಡಿದನು. ಇದಕ್ಕಿಂತ ಹಿಂದೆ ಹಲಕೆಲವು ದೇಶಿಯ ಹಾಗೂ ವಿದೇಶಿಯ ವಿದ್ವಾಂಸರು ಕನ್ನಡ ಛಂದಸ್ಸಿನ ಕಾರ್ಯ ಕೈಗೊಂಡಿದ್ದರಾದರೂ, ಅವು ಅಷ್ಟು ಮಹತ್ವ ಪಡೆದಿಲ್ಲ.

ಕನ್ನಡ ಪ್ರಾಚೀನ ಹಾಗೂ ನಡುಗನ್ನಡ ಕೃತಿಗಳನ್ನು ಪರಿಷ್ಕರಿಸಿ ಪ್ರಕಟಣೆ ಮಾಡುವುದು ವಿದ್ವಾಂಸರಲ್ಲಿ ಸಾಮಾನ್ಯವಾಗಿ ನಡೆಯುವ ಕಾರ್ಯವಾಗಿದೆ. ಆದರೆ ವ್ಯಾಕರಣ, ಛಂದಸ್ಸು-ಮುಂತಾದ ಶಾಸ್ತ್ರ ಸಂಬಂಧಿತ ವಿದ್ವತ್ ಕ್ಷೇತ್ರಗಳ ಕೃತಿಗಳನ್ನು ಅಭ್ಯಾಸ ಮಾಡಿ, ಅವುಗಳನ್ನು ಶುದ್ಧರೀತಿಯಲ್ಲಿ ಪರಿಷ್ಕರಿಸಿ ಗ್ರಂಥಸಂಪಾದನೆ ಮಾಡುವುದು ಕೆಲವೇ ವಿದ್ವಾಂಸರಿಗೆ ಮೀಸಲಾಗಿದೆ. ಇಂತಹ ಶಾಸ್ತ್ರಸಂಬಂಧಿ ಕೃತಿಗಳ ಪರಿಷ್ಕರಣೆ ಪಾಂಡಿತ್ಯ, ಪರಿಶ್ರಮ, ಸತತ ಅಧ್ಯಯನ, ಸಹನೆ, ತಾಳ್ಮೆಗಳನ್ನು ಅಗತ್ಯವಾಗಿ ಬೇಡುತ್ತದೆ. ಇಂತಹ ಕೆಲವು ಮಹತ್ವಪೂರ್ಣ ವಿದ್ವಾಂಸರ ಸಾಲಿನಲ್ಲಿ ಎಲ್.ಬಸವರಾಜು ಅವರು ನೆಲೆಗೊಂಡಿರುವುದು ಅವರ ವಿದ್ವತ್ ಸಾಮರ್ಥ್ಯಕ್ಕೆ ಕೈಗನ್ನಡಿಯಾಗಿದೆ.

---

ಕವಿರಾಜಮಾರ್ಗ, ಗುಣಗಾಂಕಿಯಂ, ಛಂದೋವಿಚಿತಿ, ಛಂಧೋಶಾಸನ, ಷಟ್ಪ್ರತ್ಯಯ ಹಾಗೂ ವೃತ್ತರತ್ನಾಕರ ಟೀಕೆ ಕೃತಿಗಳಿರುವುದಾದರೂ ಪ್ರಸ್ತುತ ಪ್ರಬಂಧದ ಮಿತಿಯಲ್ಲಿ ಈ ಮೇಲಿನ ನಾಲ್ಕನ್ನು ಮಾತ್ರ ಚರ್ಚಿಸಲಾಗಿದೆ.

ಕನ್ನಡ ಛಂದಸ್ಸಿನ ಮೊತ್ತಮೊದಲ ಅಧಿಕೃತ ದಾಖಲೆಯಾದ ನಾಗವರ್ಮನ 'ಛಂದೋಬುಧಿ' ಕೃತಿಯನ್ನು ಕ್ರಿ.ಶ. ೧೮೭೫ರಲ್ಲಿ ಕಿಟ್ಟೆಲ್ಲರು ಪರಿಷ್ಕರಿಸಿ ಸಂಪಾದಿಸಿದರು. ಅನಂತರ ದೇಶಿಯ ವಿದ್ವಾಂಸರಾದ ಎ.ಕೆ.ರಾಮಾನಜಯ್ಯಂಗಾರ್ ಮತ್ತು ಎಸ್.ಎಸ್. ರಾಮಸ್ವಾಮಯ್ಯಂಗಾರ್ ಅವರು ಇದನ್ನು ಪರಿಷ್ಕರಿಸಿದರು.ಕನ್ನಡ ಛಂದೋಭಂಡಾಗಾರದಲ್ಲಿದ್ದ 'ನಂದಿಛಂದೋರ್ಣವ'ವನ್ನು ೧೯೦೯ ರಲ್ಲಿ ಎಂ.ಎ.ರಾಮಾನುಜಯ್ಯಂಗಾರ್ ಅವರು ಎರಡು ಪ್ರತಿಗಳ ನೆರವುನಿಂದ ವಿವರಣಸಹಿತವಾಗಿ ಪರಿಷ್ಕರಿಸಿ ಅಚ್ಚು ಹಾಕಿಸಿದರು. ಅವರು ವಾಸ್ತವವಾಗಿ ಮುದ್ರಿಸಿರಿವುದು ನಂದಿಛಂದಸ್ಸಿನ ಕೆಲವು ಭಾಗ ಮಾತ್ರ.(ಎರಡನೆಯ ಅಧ್ಯಾಯವಷ್ಟೆ) ಮುಂದೆ ೧೯೩೪ ರಲ್ಲಿ ಎಚ್.ಶೇಷಯ್ಯಂಗಾರ್‌ರು Annuals of Oriental Research ಕನ್ನಡಕಾವ್ಯಮಾಲೆ ಯಲ್ಲಿ ಈಶ್ವರಕವಿಯ 'ಕವಿಜಿಹ್ವಾಬಂಧನ'ವನ್ನು ಪ್ರಕಟಿಸಿದರು. ತರುವಾಯ ಇದು ೧೯೫೦ ರಲ್ಲಿ ಆರ್.ಎಸ್.ಪಂಚಮುಖಿ ಅವರಿಂದ ಹಾಗೂ ೧೯೫೨ ರಲ್ಲಿ ಎ.ಆರ್.ಕೃಷ್ಣಶಾಸ್ತ್ರಿ ಅವರಿಂದ ಇದು ಮರು ಪರಿಷ್ಕರಣಗೊಂಡು ಪ್ರಕಟಗೊಂಡಿತು. ಎಚ್.ಶೇಷಯ್ಯಂಗಾರ್ ಅವರ ಕನ್ನಡಕಾವ್ಯಮಾಲೆಯಲ್ಲಿ ಎಂ.ಮರಿಯಪ್ಪಭಟ್ಟರ ನೇತೃತ್ವದಲ್ಲಿ ಗುಣಚಂದ್ರನ 'ಛಂದಸ್ಸಾರ'ವೂ ಪರಿಷ್ಕರಣಗೊಂಡು ಪ್ರಕಟಗೊಂಡಿತು. ಈ ಮೇಲಿನ ಎಲ್ಲಾ ಪರಿಷ್ಕರಣಗಳು ಪ್ರಕಟಗೊಂಡಿತ್ತಾದರೂ ಅವು ದೋಷಪೂರಿತವಾಗಿದ್ದವು ಎಂಬುದನ್ನು ಮರೆಯುವಂತಿಲ್ಲ. ಇಂತಹ ಕೊರತೆಯನ್ನು ನೀಗಿಸುವ ಸಲುವಾಗಿ, ಎಲ್.ಬಸವರಾಜು ಅವರು ಎಚ್.ಡಿ.ವೇಲಣಕರ್ ಅವರ 'ಜಯದಾಮನ್' ಕೃತಿಯ ಮಾದರಿಯಲ್ಲಿ ನಾಲ್ಕು ಛಂದೋಗ್ರಂಥಗಳನ್ನು ಒಂದೆಡೆ ಅಡಕಗೊಳಿಸಿ ೧೯೭೪ ರಲ್ಲಿ 'ಕನ್ನಡ ಛಂದಸ್ಸಂಪುಟ'ವನ್ನು ಹೊರತಂದರು.

ಎಲ್.ಬಸವರಾಜು ಅವರು ತಮ್ಮ ಗ್ರಂಥದ ಅರಿಕೆಯಲ್ಲಿ ಮೇಲೆ ಹೇಳಿದ ಕೆಲವು ಪರಿಷ್ಕರಣಗಳ ಜೊತೆಗೆ ಕನ್ನಡ ವಿವಿಧ ಛಂದೋಗ್ರಂಥಗಳ ರಚನೆ ಹಾಗೂ ಪರಿಷ್ಕರಣೆಗಳನ್ನು ಸವಿವರವಾಗಿ ತಿಳಿಸಿರುವುದರೊಂದಿಗೆ ಅವುಗಳಲ್ಲಿನ ದೋಷಗಳನ್ನು ಆಧಾರಸಹಿತವಾಗಿ ದರ್ಶಿಸುತ್ತಾರೆ.ಅಲ್ಲದೆ ತಾವು ಈ ಶುದ್ಧ ಪರಿಷ್ಕರಣಕಾರ್ಯಕ್ಕಾಗಿ ಬಳಸಿಕೊಂಡಿರುವ ಹಸ್ತಪ್ರತಿಗಳ ವಿವರ ಹಾಗೂ ಕೃತಿರಚನೆಗೆ ನೆರವಾದ ಸಂಗತಿಗಳನ್ನು ತಿಳಿಸುತ್ತಾರೆ.

'ಕನ್ನಡ ಛಂದಸ್ಸಂಪುಟ' ಕೃತಿಗೆ ಎಲ್.ಬಸವರಾಜು ಅವರು ಸುಮಾರು ೪೧ ಪುಟಗಳ ಸುದೀರ್ಘವಾದ ಪೀಠಿಕೆ ಬರೆದಿದ್ದಾರೆ. ಇದರಲ್ಲಿ ನಾಲ್ಕೂ ಛಂದೋಗ್ರಂಥಗಳ ಸ್ವರೂಪ, ವಿನ್ಯಾಸ ಹಾಗೂ ಛಂದೋಗ್ರಂಥಗಳಲ್ಲಿನ ಸಾಮಾನ್ಯಾಂಶಗಳನ್ನು ಪಟ್ಟಿಹಾಕುತ್ತಾರೆ. ಈ ಹಿಂದೆ ಎಚ್.ಡಿ.ವೇಲಣಕರ್ ಸಂಪಾದಿಸಿದ ಕೃತಿ 'ಜಯದಾಮನ್' ಮಾದರಿಯಲ್ಲಿ, ಯಾವುದೇ ಛಂದೋಕೃತಿಯಲ್ಲಿ ಸಾಮಾನ್ಯವಾಗಿ ಲಕ್ಷಿಸಲ್ಪಡುವ ಎಲ್ಲಾ ಛಂದೋಪ್ರಕಾರಗಳನ್ನು ಸ್ಥೂಲವಾಗಿ ೪ ವಿಧವಾಗಿ ವಿಂಗಡಿಸುತ್ತಾರೆ. ಅವು–

೧) ವರ್ಣವೃತ್ತಗಳು
೨) ಮಾತ್ರಾವೃತ್ತಗಳು
೩) ಜಾತಿವೃತ್ತಗಳು
೪) ಕನ್ನಡ ಜಾತಿಗಳು

ಮುಂದುವರಿದು ವೇಲಣಕರ್ ಅವರು ಲೌಕಿಕಛಂದಸ್ಸನ್ನು'ವರ್ಣವೃತ್ತ' ಮತ್ತು 'ಮಾತ್ರಾವೃತ್ತ' ಎಂದು ವಿಭಾಗಿಸಿವುದರೊಂದಿಗೆ, ಅವುಗಳಲ್ಲಿರುವ ಕೆಲವು ಒಳಬಗೆಗಳನ್ನು ವಿವರಿಸಿವರು. ಈ ಸೂತ್ರವನ್ನೇ ಅನುಸರಿಸಿರುವ ಎಲ್.ಬಸವರಾಜು ಅವರು ವೇಲಣಕರರ ಮೊದಲ ವಿಭಾಗಕ್ರಮವೇ ಹೆಚ್ಚು ಸೂಕ್ತ ಎಂದು ಅಭಿಪ್ರಾಯಿಸುತ್ತಾರೆ.

ಕನ್ನಡದ ಛಂದೋಗ್ರಂಥಗಳಾದ 'ಛಂದೋಂಬುಧಿ', 'ಕವಿಜಿಹ್ವಾಬಂಧನ', 'ಛಂದಸ್ಸಾರ' ಹಾಗೂ 'ನಂದಿಛಂದೋರ್ಣವ' ಕೃತಿಗಳನ್ನು ಸವಿವರವಾಗಿ ಪರಿಚಯಿಸಿ ಅವುಗಳಲ್ಲಿರುವ ವಿಷಯಸಾಮಾಗ್ರಿಗಳನ್ನು ಕುರಿತು ಸಾಕಷ್ಟು ಜಿಜ್ಞಾಸೆ ಮಾಡಿರುವರು. ಕೆಲವೆಡೆ ತಮ್ಮ ಅಭಿಪ್ರಾಯಗಳ ಪುಷ್ಟೀಕರಣಕ್ಕಾಗಿ ಉಪಯುಕ್ತ, ಅಗತ್ಯ ಅಡಿಟಿಪ್ಪಣಿಗಳನ್ನು ನೀಡಿರುವರು. ಇವುಗಳ ಜೊತೆಗೆ 'ಛಂದೋಂಬುಧಿ'ಯ ಕರ್ತೃವಾದ ನಾಗವರ್ಮನ ಬಗ್ಗೆ ಚರ್ಚಿಸುತ್ತಾ, ಈತ ಮೂರನೆಯ ನಾಗವರ್ಮನೆಂದು, ಈತ ಶೈವ ಬ್ರಾಹ್ಮಣನೆಂದು ಎಲ್.ಬಸವರಾಜು ಅವರು ಹೇಳಿರುವುದು ಕುತೂಹಲ ಹಾಗೂ ಆಶ್ಚರ್ಯದ ಸಂಗತಿ. (ನಾಗವರ್ಮರು ಎಷ್ಟು ಜನ? ಎಂಬುದರ ಬಗ್ಗೆ ಸಂಶೋಧನೆಗಳು ನಡೆಯುತ್ತಿದ್ದು ಕವಿಚರಿತ್ರೆ ೧ ರಲ್ಲಿ ಉಲ್ಲೇಖಿತವಾದಂತೆ ಛಂದೋಂಬುಧಿಯ ಕರ್ತೃ ೧ನೇ ನಾಗವರ್ಮ ಎಂದು ಹೇಳಿರುವುದನ್ನು ಸ್ಮರಿಸಬಹುದು.) ಅನಂತರ ಈಶ್ವರಕವಿಯ 'ಕವಿಜಿಹ್ವಾಬಂಧನ' ವನ್ನು ಕೈಗೆತ್ತಿಕೊಂಡು, ಇದು ಅಧಿಕೃತವಾದ ಛಂದೋಗ್ರಂಥವಲ್ಲದಿದ್ದರೂ, ಇದರಲ್ಲಿ ಈ ಹಿಂದಿನ ಲಾಕ್ಷಣಿಕರು ಹೇಳದ ಹಲವು ವಿಶೇಷ ಸಂಗತಿಗಳಿವೆ ಎಂದು ತಿಳಿಸುತ್ತಾರೆ. ಇದರ ಮಹತ್ವವನ್ನು ತಿಳಿಸುತ್ತಾ, "ಒಟ್ಟಿನಲ್ಲಿ 'ಕವಿಜಿಹ್ವಾಬಂಧನ' ಎಂಬುದು ನಮ್ಮ ಕವಿಕಾವ್ಯದ ಸುತ್ತಲೂ ಒಂದು ಕಾಲಕ್ಕೆ ಬೆಳೆದು ಬಲಿತಿದ್ದ ಮಿಥ್ಯಾವರಣದ ಮತ್ತು ಮಿಥ್ಯಾಚಾರದ ಅಡ್ಡಸೀಳಿನೋಟವೆನ್ನಬಹುದಾದರೂ – ಅದರೊಳಗೂ ಪ್ರಾಣದ್ರವದ ಪರ್ಯಟನ ಏದುಸಿರಿನಲ್ಲಿಯೇ ಆಗಲಿ ನಡೆಯುತ್ತಿದೆಯೆಂಬುದನ್ನು ಮರೆಯಲಾಗದು" ಎನ್ನುತ್ತಾರೆ. ತರುವಾಯ ೧೭ನೆಯ ಶತಮಾನದ ಗುಣಚಂದ್ರನ 'ಛಂದಃಸ್ಸಾರ'ವನ್ನು ಕುರಿತು ಚರ್ಚಿಸುತ್ತಾ, ಗ್ರಂಥಕರ್ತನ ಜೀವನವಿಚಾರವನ್ನು ಹಾಗೂ ಕೃತಿಯ ವಿನ್ಯಾಸವನ್ನು ತಿಳಿಸುತ್ತಾರೆ. ಗುಣಚಂದ್ರ ತನ್ನ 'ಛಂದಸ್ಸಾರ'ದಲ್ಲಿ 'ವೃತ್ತರತ್ನಾಕರ'ವನ್ನು ಸಂಗ್ರಹ ಮಾಡುವುದರೊಂದಿಗೆ ಕೆಲವು ವಿಶಿಷ್ಟ ಛಂದೋಪ್ರಕಾರವನ್ನು ಲಕ್ಷಿಸಿರುವ ಬಗ್ಗೆ ತಿಳಿಸುತ್ತಾ, ಅದರ ಗುಣಲಕ್ಷಣಗಳನ್ನು ತಿಳಿಸುತ್ತಾರೆ. ಅಂತಿಮವಾಗಿ ವೀರಭದ್ರನ 'ನಂದಿಛಂದೋರ್ಣವ' ಗ್ರಂಥವನ್ನು ಅವಲೋಕನಕ್ಕೆ ತೆಗೆದುಕೊಂಡು, ಮೊದಲು ಗ್ರಂಥಕರ್ತನ ಕಾಲ,ಸ್ಥಳದ ಬಗೆಗೆ ಉಪಯುಕ್ತ ಮಾಹಿತಿಯೊಂದಿಗೆ ಈವರೆಗಿನ ಊಹಾಪೋಹಗಳಿಗೆ ತೆರೆ ಎಳೆಯುತ್ತಾರೆ. ಇದರೊಂದಿಗೆ ವೀರಭದ್ರಕವಿ ನಿರೂಪಿಸಿರುವ ವಡಿಯ ಬಳಕೆ,ಉತ್ಪಲಮಾಲ, ಪಂಚಪಾದಿವೃತ್ತ, ಅಚ್ಚ ತೆಲುಗಿನ ವಿಷಯಜಾತಿಗಳನ್ನು ಉದ್ಧರಿಸುವ ಬಗ್ಗೆ, ಅವುಗಳ ವಿಶಿಷ್ಟತೆಯನ್ನು ವಿವರಿಸುತ್ತಾರೆ. ಕನ್ನಡ–ತೆಲಗು ವಿದ್ವಾಂಸರ ನಡುವೆ ವೀರಭದ್ರನ 'ನಂದಿಛಂದೋರ್ಣವ' ಏತಸೇತುವೆಯಾಗಿದೆ ಎಂದು ಅಭಿಪ್ರಾಯಿಸುತ್ತಾರೆ. ಹೀಗೆ ಎಲ್.ಬಸವರಾಜು ಅವರು ಕನ್ನಡದ ಪ್ರಮುಖ ಪ್ರಾತಿನಿಧಿಕ ಛಂದೋಗ್ರಂಥಗಳಾದ 'ಛಂದೋಂಬುಧಿ', 'ಕವಿಜಿಹ್ವಾಬಂಧನ', 'ಛಂದಸ್ಸಾರ' ಹಾಗೂ 'ನಂದಿಛಂದೋರ್ಣವ' ಗ್ರಂಥಗಳನ್ನು ಪರಿಚಯಿಸಿರುವುದರೊಂದಿಗೆ ಅವುಗಳ ಗುಣಲಕ್ಷಣ, ವಿಶಿಷ್ಟತೆಗಳನ್ನು ಪೀಠಿಕಾಭಾಗದಲ್ಲಿ ಚರ್ಚಿಸಿರುವುದು ಹೆಚ್ಚು ಉಪಯುಕ್ತವಾಗಿದೆ.

‘ಕನ್ನಡ ಛಂದಸ್ಸಂಪುಟ’ದಲ್ಲಿ ಅನುಕ್ರಮವಾಗಿ, ‘ಛಂದೋಂಬುಧಿ’, ‘ಕವಿಜಿಹ್ವಾಬಂಧನ’, ‘ಛಂದಸ್ಸಾರ’ ಹಾಗೂ ‘ನಂದಿಛಂದೋರ್ಣವ’ ಗ್ರಂಥಗಳನ್ನು, ಈ ಹಿಂದಿನ ಕೆಲವು ಪರಿಷ್ಕರಣಗಳ ನೆರವು ಹಾಗೂ ತಮಗೆ ದೊರೆತ ಹಸ್ತಪ್ರತಿಗಳೊಂದಿಗೆ, ಕೆಲವು ಸಂಸ್ಕೃತ ಛಂದೋಗ್ರಂಥಗಳ ಆಧಾರದಿಂದ ಪ್ರಮಾಣಿಕವಾಗಿ ಶುದ್ಧರೀತಿಯಲ್ಲಿ ಪರಿಷ್ಕರಿಸಿ ಕೊಟ್ಟಿದ್ದಾರೆ. ಹಸ್ತಪ್ರತಿಗಳಲ್ಲಿನ ಪಾಠಾಂತರ ವಿವರ ಹಾಗೂ ಪಾಠಸ್ಪಷ್ಟತೆಗಾಗಿ ಅಗತ್ಯವಾದ ಅಡಿಟಿಪ್ಪಣಿ ನೀಡಲಾಗಿದೆ, ಈ ಅಡಿಟಿಪ್ಪಣಿಗಳು ಕೆಲವೆಡೆ ಇಡೀ ಪುಟವನ್ನೇ ಆವರಿಸಿರುವುದುಂಟು. ಆದರೆ ಇದು ಹಿಂದಿನ ಪರಿಷ್ಕರಣಗಳಲ್ಲಿನ ದೋಷದರ್ಶನಕ್ಕಾಗಿ ಹಾಗೂ ಶುದ್ಧ ಪರಿಷ್ಕರಣಗಳ ಸ್ಪಷ್ಟತೆಗಾಗಿ ಎಂಬುದನ್ನು ಮರೆಯುವಂತಿಲ್ಲ. ನಾಗವರ್ಮನ ‘ಛಂದೋಂಬುಧಿ’ಯ ಆರು ಅಧ್ಯಾಯಗಳನ್ನು ಶುದ್ಧ ಪರಿಷ್ಕರಣದೊಂದಿಗೆ ಜೋಡಿಸಲಾಗಿದೆ. ಎಲ್.ಬಸವರಾಜು ಅವರು ಪರಿಷ್ಕರಿಸಿದ ನಾಗವರ್ಮನ ‘ಛಂದೋಂಬುಧಿ’ ಇಂದಿಗೂ ಮಾದರಿಯಾಗಿರುವುದನ್ನು ನೆನೆಯಬಹುದು. ನಾಗವರ್ಮ ತನ್ನ ಗ್ರಂಥದಲ್ಲಿ ಹೇಳಿರುವ ಕೆಲವು ಛಂದೋಪ್ರಕಾರಗಳು ಹಾಗೂ ಬಿಟ್ಟಿರುವ ಕೆಲವು ಅಂಶಗಳನ್ನು ಕುರಿತು ಎಲ್.ಬಸವರಾಜು ಅವರು ತಿಳಿಸಿದ್ದಾರೆ. ಜೊತೆಗೆ ನಾಗವರ್ಮ ಅನುಸರಿಸಿದ ಹೆಜ್ಜೆಗಳನ್ನು ಸ್ಪಷ್ಟವಾಗಿ ಗುರುತಿಸಿ, ಕೆಲವು ಛಂದೋಪ್ರಕಾರಗಳನ್ನು ಇತರ ಸಂಸ್ಕೃತಗಳೊಂದಿಗೆ ತಾಳೆನೋಡಿ ‘ಛಂದೋಂಬುಧಿ’ಯನ್ನು ಸಂಪಾದಿಸಿ ಕೊಟ್ಟಿರುವುದು ಮಹತ್ತ್ವದ ಸಂಗತಿ.

ಅನಂತರದಲ್ಲಿ ಎಲ್.ಬಸವರಾಜು ಅವರು ಅಭಿನವ ಕೇಶಿರಾಜ ಬಿರುದಾಂಕಿತ ಈಶ್ವರಕವಿಯ ‘ಕವಿಜಹ್ವಾಬಂಧನ’ದ ಪರಿಷ್ಕರಣದಲ್ಲಿ ವಿಶಿಷ್ಟಮಾದರಿ ಅನುಸರಿಸಿದ್ದಾರೆ. ಅಂದರೆ ಪ್ರತಿಸೂತ್ರ ಉಲ್ಲೇಖದ ಮುನ್ನ ಅದು ಹೊಂದಿರುವ ಛಂದೋಪ್ರಕಾರವನ್ನು ನಿರ್ದೇಶಿಸಿ, ಸೂತ್ರದ ಬಲಬಾಗದಲ್ಲಿ ಸಣ್ಣಕ್ಷರದಲ್ಲಿ ಸೂತ್ರಸಾರವನ್ನು ಒಂದು ಪದದ ಮೂಲಕ ತಿಳಿಸಲಾಗಿದೆ. ಪ್ರಥಮೋಧ್ಯಾಯದಿಂದ ಚತುರ್ಥ್ಯೋಧ್ಯಾಯದವರೆಗೆ ಕ್ರಮವಾಗಿ ಸೂತ್ರ,ಅನ್ವಯ ಸಹಿತವಾಗಿ ವಿವರಿಸಲಾಗಿದೆ. ಎಂದಿನಂತೆ ಪಾಠಾಂತರಗಳನ್ನು ಅಡಿಟಿಪ್ಪಣಿಯ ಮೂಲಕ ಸೂಚಿಸಿದೆ. ಈ ‘ಕವಿಜಿಹ್ವಾಬಂಧನ’ದ ಶುದ್ಧಪರಿಷ್ಕರಣೆಗಾಗಿ ಮೈಸೂರಿನ ಮರಿಮಲ್ಲಪ್ಪ ವಿದ್ಯಾಸಂಸ್ಥೆಯ ಅಧ್ಯಾಪಕ ಶಿವಲಿಂಗಯ್ಯ ಅವರ ಬಳಿ ಇದ್ದ ಮೂಲಕ್ಕೆ ಹತ್ತಿರವಾದ ಪ್ರಾಚೀನ ಓಲೆಪ್ರತಿಯ ಸಹಾಯದಿಂದ ಪರಿಷ್ಕರಣ ಮಾಡಿರುವುದಾಗಿ ಸಂಪಾದಕರೇ ಹೇಳಿಕೊಂಡಿದ್ದಾರೆ.

ಈಶ್ವರಕವಿಯ ‘ಕವಿಜಿಹ್ವಾಬಂಧನ’ದ ಪರಿಷ್ಕೃತಪಾಠದ ತರುವಾಯ ಎಲ್.ಬಸವರಾಜು ಅವರು ಗುಣಚಂದ್ರನ ‘ಛಂದಃಸ್ಸಾರ’ದ ಪರಿಷ್ಕರಣಕಾರ್ಯವನ್ನು ಕೈಗೆತ್ತಿಕೊಂಡುದ್ದಾರೆ. ‘ಛಂದಃಸ್ಸಾರ’ದ ಪುನರ್ ಪರಿಷ್ಕರಣಕ್ಕೆ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದ ಕೆ.ಎ.೨೪೧ ನಂಬರಿನ ಕಾಗದದಪ್ರತಿ ಹಾಗೂ ಇದಕ್ಕೆ ಮೂಲವಾದ ಕೇದಾರಭಟ್ಟನ ‘ವೃತ್ತರತ್ನಾಕರ’ವನ್ನು ಅಡಿಅಡಿಗೂ ತಾಳೆನೋಡಿ ಸಿದ್ಧಪಡಿಸಲಾಗಿದೆ ಎಂದಿದ್ದಾರೆ. ‘ಛಂದಃಸ್ಸಾರ’ದಲ್ಲಿನ ಐದು ಅಧ್ಯಾಯಗಳಲ್ಲಿ ‘ಕವಿಜಿಹ್ವಾಬಂಧನ’ದಲ್ಲಿರುವಂತೆ ಸೂತ್ರದ ಬಲಭಾಗಲ್ಲಿ ಸೂತ್ರಸಾರ ವಿವರಣೆ ನೀಡಲಾಗಿದೆ. ಅಲ್ಲದೆ ಗುಣಚಂದ್ರನು ಹೇಳಿರುವ ಕೆಲವು ವಿಶಿಷ್ಟ ಛಂದೋಪ್ರಕಾರಗಳನ್ನು ಅಡಿಟಿಪ್ಪಣಿಯಲ್ಲಿ ತಿಳಿಸಿದ್ದಾರೆ.

ಅಂತಿಮವಾಗಿ ವೀರಭದ್ರಕವಿ ವಿರಚಿತ ‘ನಂದಿಛಂದೋರ್ಣವ’ವನ್ನು ಪರಿಷ್ಕರಿಸುವಲ್ಲಿ ಧಾರವಾಡದ ಕನ್ನಡಸಂಶೋಧನಾ ಸಂಸ್ಥೆಯ ಕೆ.ಆರ್.ಐ.೧೧೮ ನಂಬರಿನ ಕಾಗದದ ಪ್ರತಿ ಹಾಗೂ

ವೀರಭದ್ರಕವಿ ಅನುಸರಿಸಿರುವ ತೆಲಗಿನ ಅಪ್ಪಕವಿಯ ಛಂದೋಗ್ರಂಥದ ಆಧಾರದಿಂದ ಶುದ್ಧವಾಗಿ ಪರಿಷ್ಕರಣ ಮಾಡಲಾಗಿದೆ. ಈವರೆಗೆ 'ನಂದಿಛಂದೋರ್ಣವ' ಗ್ರಂಥಕರ್ತೃವಿನ ಬಗ್ಗೆ ಸಂದೇಹಾತ್ಮಕವಾದ ಕೆಲವು ಸಂಗತಿಗಳಿಗೆ ತೆರೆ ಎಳೆದು, ಗ್ರಂಥಕರ್ತೃ ವೀರಭದ್ರ ಎಂದೂ, ಅತ ಕೃತಿ ರಚಿಸಿದ್ದು ೨೮–೪–೧೮೪೬ ರಲ್ಲಿ ಎಂದೂ, ಇವನು ದರೂರುಗ್ರಾಮದಲ್ಲಿದ್ದ ಶಿವಯೋಗಿ ವೀರಣಾರ್ಯನು ರೇಣುಕಾರ್ಯನ ಪರಂಪರೆಯವನು ಎಂದೂ ಸ್ಪಷ್ಟವಾಗಿ ತಿಳಿಸಿದ್ದಾರೆ. ಜೊತೆಗೆ ವೀರಭದ್ರ ತನ್ನ ಗ್ರಂಥದಲ್ಲಿ ತಿಳಿಸಿರುವ ಕೆಲವು ವಿಶಿಷ್ಟ ಅಂಶಗಳ ಆಧಾರದಿಂದ (ಕರ್ನಾಟಕ ವಿಷಯ ಜಾತಿ... ಸೀಸ...) ದ್ರಾವಿಡ ಸಂಬಂಧವನ್ನು ಸ್ಪಷ್ಟವಾಗಿ ತಿಳಿಸಿದ್ದಾರೆ. 'ನಂದಿಛಂದೋರ್ಣವ' ದ ೩ ಅಧ್ಯಾಯಗಳನ್ನು ಶಾಸ್ತ್ರೀಯವಾಗಿ ಪರಿಷ್ಕರಿಸಿ, ಪಾಠಾಂತರಗಳನ್ನು ಅಡಿಟಿಪ್ಪಣಿಯಲ್ಲಿ ಹೇಳಿದೆ. ಕೆಲವೆಡೆ ಅಲ್ಲಲ್ಲಿ ವಿಶೇಷ ಸಂದರ್ಭದಲ್ಲಿ ಸೂತ್ರದ ಕೆಳಗೆ ಸಣ್ಣಕ್ಷರದಲ್ಲಿ 'ವಿಶೇಷ' ಎಂಬ ಶೀರ್ಷಿಕೆಯಡಿ ಅಗತ್ಯ ವಿವರಣೆಯನ್ನು ನೀಡಲಾಗಿದೆ.

ಹೀಗೆ ಎಲ್.ಬಸವರಾಜು ಅವರು ಕನ್ನಡ ಛಂದಸ್ಸಿನ ಪ್ರಾತಿನಿಧಿಕ ಗ್ರಂಥಗಳಾದ 'ಛಂದೋಂಬುಧಿ', 'ಕವಿಜಿಹ್ವಾಬಂಧನ','ಛಂದಸ್ಸಾರ' ಹಾಗೂ 'ನಂದಿಛಂದೋರ್ಣವ'– ಗ್ರಂಥಗಳನ್ನು ಶುದ್ಧಪರಿಷ್ಕರಣಗಳ ಮೂಲಕ ಹೊರತಂದಿರಿವುದು ಕನ್ನಡ ಶಾಸ್ತ್ರಸಾಹಿತ್ಯದಲ್ಲಿ ವಿಶಿಷ್ಟವಾದ ದಿಟ್ಟ ಹೆಜ್ಜೆಯಾಗಿದೆ. ನಾಲ್ಕು ಗ್ರಂಥಗಳ ಪ್ರಾಮಾಣಿಕ ಪರಿಷ್ಕರಣಗಳನ್ನು'ಕನ್ನಡ ಛಂದಸ್ಸಂಪುಟ' ಎಂದು ಕರೆದಿರುವುದು ಗ್ರಂಥಸಾರದ ದೃಷ್ಟಿಯಿಂದ ಉಚಿತವಾಗಿದ್ದು, ಅನ್ವರ್ಥವಾಗಿದೆ. ಈ ಕೃತಿಯೊಂದರಿಂದಲೇ ಕನ್ನಡ ಛಂದಸ್ಸಿನ ವಿವಿಧ ಪ್ರಕಾರಗಳನ್ನು ದರ್ಶಿಸಬಹುದಾಗಿದೆ. ಈ ಕೃತಿಯಲ್ಲಿ ನಡೆಸಿರುವ ಉಪಯುಕ್ತ ಚರ್ಚೆ ಕೃತಿಗೆ ಹೆಚ್ಚು ಮೌಲ್ಯ ಒದಗಿಸಿದೆ.

ಗ್ರಂಥಾರಂಭದಲ್ಲಿ ಸಂಪಾದಕರು ವಿಷಯಾನುಕ್ರಮಣಿಕೆಯನ್ನು, ಕೃತಿಯಲ್ಲಿ ಬಳಕೆಯಾಗಿರುವ ಪಾರಿಭಾಷಿಕ ಸಂಕೇಯಗಳನ್ನು ಸ್ಪಷ್ಟವಾಗಿ ನಿರೂಪಿಸಿದ್ದಾರೆ. ಹಿಂದೆಯೇ ಹೇಳಿದಂತೆ,ಅರಿಕೆಯಲ್ಲಿ ನಾಲ್ಕು ಛಂದೋಗ್ರಂಥ ಪರಿಷ್ಕೃತ ಪ್ರಕಟಣೆಗಳ ಚರ್ಚೆ, ಸವಿವರವಾದ ವಿಮರ್ಶೆಯೊಂದಿಗೆ ನೀಡಲಾಗಿದೆ. ಹಲವು ಹಸ್ತಪ್ರತಿಗಳ ಸ್ವರೂಪವನ್ನು ವಿವರಣೆಯೊಂದಿಗೆ ನಿರ್ದೇಶಿಸಲಾಗಿದೆ. ಸುಮಾರು ೪೦ ಪುಟಗಳಷ್ಟು ವಿಸ್ತಾರವಾದ ಪೀಠಿಕಾಭಾಗದಲ್ಲಿ ನಾಲ್ಕು ಛಂದೋಗ್ರಂಥಗಳನ್ನು ಉಪಯುಕ್ತ ಉದಾಹರಣೆಯೊಂದಿಗೆ ಸವಿವರವಾಗಿ ಪರಿಚಯಿಸಿ, ಆ ಕೃತಿಗಳು ಇತರ ಕೃತಿಯೊಂದಿಗಿಟ್ಟುಕೊಂಡಿರುವ ಸಾದೃಶ್ಯ ಸಂಬಂಧವನ್ನು ತೌಲನಿಕವಾಗಿ ಚರ್ಚಿಸುರುವುರೊಂದಿಗೆ ಅವುಗಳ ವಿಶಿಷ್ಟತೆಗಳನ್ನು ದರ್ಶಿಸಲಾಗಿದೆ.

ಎಲ್.ಬಸವರಾಜು ಅವರು ಗ್ರಂಥಾಂತ್ಯದಲ್ಲಿ ಹೆಚ್ಚಿನ ಮಾಹಿತಿಗಾಗಿ, ಉಪಯುಕ್ತವಾದ ೧೬ ಅನುಬಂಧಗಳನ್ನು ನೀಡಿದ್ದಾರೆ. ಓದುಗರಿಗೆ ಇವುಗಳನ್ನು ನೋಡಿದಾಕ್ಷಣ ದಿಗ್ಭ್ರಮೆ ಮೂಢಿಸುವುದರಲ್ಲಿ ಆಶ್ಚರ್ಯವಿಲ್ಲ. ಈ ೧೬ ಅನುಬಂಧಗಳಲ್ಲಿ ಈ ಮೇಲಿನ ನಾಲ್ಕು ಛಂದೋಗ್ರಂಥಗಳಲ್ಲಿ ಬಳಕೆಯಾಗಿರುವ ಕನ್ನಡ ಛಂದೋಪ್ರಕಾರಗಳನ್ನು ಪ್ರತ್ಯೇಕವಾಗಿ ಕೊಟ್ಟು, ಅವು ಬಳಕೆಯಾಗಿರುವ ಸ್ಥಾನನಿರ್ದೇಶವನ್ನು ನಿರ್ದಿಷ್ಟ ಸೂಚಿಯೊಂದಿಗೆ ನೀಡಿದ್ದಾರೆ. ಯಾವುದೇ ಸಾಹಿತ್ಯಾಸಕ್ತನಿಗೆ ಕನ್ನಡದ ಯಾವುದೇ ಛಂದೋಪ್ರಕಾರದ ಸ್ವರೂಪ ತಿಳಿಯಲು ಈ ಅನುಬಂಧಗಳು ಸಹಕಾರಿಯಾಗಿವೆ. ಅನುಬಂಧ ೧ ರಲ್ಲಿ 'ವರ್ಣವೃತ್ತಸಮಚತುಷ್ಪದಿ'ಯನ್ನು ತಿಳಿಸಿ, ಅದರ ೩೧ ಬಗೆಗಳನ್ನು ಸೋದಾರಣವಾಗಿ, ಅದು ಬಳಕೆಯಾಗಿರುವ ಸ್ಥಾನಗಳನ್ನು ನಿರ್ದಿಷ್ಟ ಸಂಖ್ಯಾಸೂಚಿಯೊಂದಿಗೆ ತಿಳಿಸಿದ್ದಾರೆ. ಅನುಬಂಧ ೨ ರಲ್ಲಿ ೧೦ ವರ್ಣವೃತ್ತ

ದಂಡಕಗಳನ್ನೂ, ಅನುಬಂಧ ೩ ರಲ್ಲಿ ವರ್ಣವೃತ್ತ ಅರ್ಧಸಮಚತುಷ್ಪದಿಯ ೧೯ ಬಗೆಗಳನ್ನು ತಿಳಿಸಿದ್ದಾರೆ. ಅನುಬಂಧ ೪ ರಲ್ಲಿ ಮಾತ್ರಾಮಿಶ್ರಿತ ವರ್ಣವೃತ್ತ ಅರ್ಧಸಮಗಳ ೬ ಬಗೆ ಹಾಗೂ ಅನುಬಂಧ ೫ ರಲ್ಲಿ (ಮಾತ್ರಾ ಮಿಶ್ರಿತ) ವರ್ಣವೃತ್ತ ವಿಷಮ ಚತುಷ್ಪದಿಯ ೮ ವಿಧಗಳನ್ನೂ, ಅನುಬಂಧ ೬ ರಲ್ಲಿ ಶುದ್ಧವರ್ಣವೃತ್ತ ವಿಷಮ ಚತುಷ್ಪದಿಯ ೧೪ ಬಗೆಗಳನ್ನು ಸೂಚಿಸಿದ್ದಾರೆ. ಅನುಬಂಧ ೭ ರಲ್ಲಿ ಆರ್ಯಾಸ್ಕಂಧ ಸಮೂಹದ ೧೫ ಬಗೆಯನ್ನು, ಅನುಬಂಧ ೮ ರಲ್ಲಿ ಷೋಡಶಾಮಾತ್ರಾ ದ್ವಿಪಾದಿಯ ೫ ಬಗೆಯನ್ನು ತಿಳಿಸಿದ್ದಾರೆ. ಅನುಬಂಧ ೯ ಪಾದಪಾದ ಭಿನ್ನಮಾತ್ರಾದ್ವಿಪಾದಿಯ ೯ ರೀತಿಯನ್ನು, ಅನುಬಂಧ ೧೦ ತಾಳವೃತ್ತಗಳ ೮ ವಿಧಗಳನ್ನು ತಿಳಿಸಲಿಕ್ಕಾಗಿವೆ. ಅನುಬಂದ ೧೧ ರಲ್ಲಿ ರಗಳೆಯ ೪ ವಿಧದ ಲಕ್ಷಣಗಳಿದ್ದರೆ, ಅನುಬಂಧ ೧೨ ರಲ್ಲಿ ಕನ್ನಡ ಅಂಶ ಛಂದೋರೂಪಗಳು ಎಂದು ೧೭ ವಿವಿಧ ರೂಪಗಳ ಲಕ್ಷಣವನ್ನು ತಿಳಿಸಲಾಗಿದೆ. ಅನುಬಂಧ ೧೩ ತೆಲಗು ಜಾತಿವೃತ್ತಗಳ ಹೇಳಿವುದಕ್ಕಾದರೆ, ೧೩ಎ ನಲ್ಲಿ ಅನುಷ್ಟುಪ್ ಪ್ರಕಣದ ೯ ವಿಧಗಳನ್ನು ತಿಳಿಸಲಾಗಿದೆ. ಅನುಬಂಧ ೧೪ ಷಟ್ಪದಿಗಳ ವಿಧಗಳ ವಿವರಣೆಗಳಿಗಾದರೆ, ೧೫ ನೆಯ ಅನುಬಂಧ ೧೨ನೇ ಶತಮಾನದವರೆಗೆ ಕನ್ನಡ ಕವಿಗಳು ಬಳಸಿರುವ ರಗಳೆಗಳ ಪಟ್ಟಿಗೆ ಮೀಸಲಾಗಿದೆ. ೧೬ನೇ ಅನುಬಂಧ ೧೨ನೇ ಶತಮಾನದವರೆಗೆ ಕನ್ನಡ ಕವಿಗಳು ಬಳಸಿರುವ ಮಿಕ್ಕ ಛಂದೋರೂಪಗಳ ಪಟ್ಟಿಯನ್ನು ಒದಗಿಸಿದರೆ, ಅಂತಿಮವಾದ ೧೭ನೇ ಅನುಬಂಧ ಛಂದಸ್ಸಿನಲ್ಲಿ ಬಳಕೆಯಾಗಿರುವ ವೃತ್ತಗಳ ಅಕಾರಾದಿಯನ್ನು ಪಟ್ಟಿಮಾಡಿರುವ ವೃತ್ತ-ಪದಸೂಚಿಯಾಗಿದೆ. ಕೃತಯಲ್ಲಿ ಕೊನೆಯದಾಗಿ ೪ ಪುಟಗಳ ಒಪ್ಪೋಲೆ ಪಟ್ಟಿಯಿದೆ.

'ಕನ್ನಡ ಛಂದಸ್ಸಂಪುಟ'ದ ಬಗೆಗೆ (ಎಲ್.ಬಸವರಾಜು ಅವರೇ ಬರೆದಿರುವ) ಬೆನ್ನುಡಿ – "ಛಂದಶ್ಶಾಸ್ತ್ರವನ್ನು ಕುರಿತ ಪ್ರಾಚೀನವೂ, ಪ್ರಾತಿನಿಧಿಕವೂ ಆದ ನಾಲ್ಕು ಕನ್ನಡ ಗ್ರಂಥಗಳು ಈ ಒಂದೇ ಸಂಪುಟದಲ್ಲಿ ಅಡಕವಾಗಿವೆ. ಅವುಗಳ ಗ್ರಂಥಭಾಗದ, ನಿರ್ದೇಶನ, ವ್ಯಾಖ್ಯಾನ, ಟಿಪ್ಪಣಿ, ಪ್ರಸ್ತಾರ, ಸಂದರ್ಭಸಾಮಾಗ್ರಿ ಮುಂತಾದ ಅಧ್ಯಾಯಗಳ ಅನುಮಾನಗಳನ್ನು ತಿದ್ದಲು, ಸಂಶಯಗಳನ್ನು ಪರಿಹರಿಸಲು...... ನಿಂತಿವೆ.ಒಂದಲ್ಲ, ಎರಡಲ್ಲ, ಹದಿನೇಳು ವಿವಿಧ ಅನುಬಂಧಗಳು ಹಲವು ವಿಚಾರಗಳನ್ನು ಸಲೀಲವಾಗಿ ಮನವರಿಕೆ ಮಾಡಲು ಸುಸಜ್ಜಿತವಾಗಿ ಕನ್ನಡಕ್ಕಷ್ಟೆ ಅಲ್ಲ, ಸಂಸ್ಕೃತ- ಪ್ರಾಕೃತ- ತೆಲಗು ಈ ಎಲ್ಲಾ ಭಾಷೆಗಳಿಗೂ ವಿಶಿಷ್ಟವಾದ ಛಂದೋಪ್ರಕಾರಗಳ ವಿಚಾರ ಇಲ್ಲಿ ಉಚಿತ ಪ್ರಮಾಣದಲ್ಲಿ ಸಂಯೋಜಿತವಾಗಿದೆ. ಸಾಹಿತ್ಯಾದಾಸಕ್ತ ವಿದ್ಯಾರ್ಥಿ- ಅಧ್ಯಾಪಕ-ವಿದ್ವಾಂಸರುಗಳಿಗೆ 'ಕನ್ನಡ ಛಂದಸ್ಸಂಪುಟ' ಅತ್ಯುಪಯುಕ್ತ ಕೈಪಿಡಿಯೂ ಹೌದು, ಆಕರವೂ ಹೌದು" ಎಂಬ ನುಡಿಗಳು ಕೃತಿಯ ಸ್ಥೂಲಸ್ವರೂಪವನ್ನು ದರ್ಶಿಸುವುದರೊಂದಿಗೆ ಪ್ರಾಮಾಣಿಕವಾದುದ್ದಾಗಿದೆ.

ಒಟ್ಟಿನಲ್ಲಿ ೧೯೭೪ ರಲ್ಲಿ ಪ್ರಕಟಗೊಂಡ ಎಲ್.ಬಸವರಾಜು ಅವರ 'ಕನ್ನಡ ಛಂದಸ್ಸಂಪುಟ' ಕನ್ನಡ ಸಂಶೋಧನಾ ಕ್ಷೇತ್ರದಲ್ಲಿ ಒಂದು ವಿನೂತನ ವಿಶಿಷ್ಟ ಹೆಜ್ಜೆಯಾಗಿ, ಇತರ ಸಂಶೋಧನಾಸಕ್ತರಿಗೆ ಮಾದರಿಯಾಗಿದೆ ಎನ್ನುವಲ್ಲಿ ಯಾವುದೇ ಸಂಶಯವಿಲ್ಲ.

ಶ್ರೀ ಜಗದ್ಗುರು ಮುರುಘರಾಜೇಂದ್ರ ವಿದ್ಯಾಪೀಠ ಗ್ರಂಥಮಾಲೆ

ಕೇಶಿರಾಜ ವಿರಚಿತ

# ಶಬ್ದಮಣಿದರ್ಪಣಂ

ಸಂಪಾದಕ

ಡಾ|| ಎಲ್. ಬಸವರಾಜು

ನಿವೃತ್ತ ಕನ್ನಡ ಪ್ರಾಧ್ಯಾಪಕ, ಮೈಸೂರು ವಿಶ್ವವಿದ್ಯಾನಿಲಯ

ಪ್ರಕಾಶಕರು

ಶ್ರೀ ಚಿನ್ಮೂಲಾದ್ರಿ ಬೃಹನ್ಮಠ ಸಂಸ್ಥಾನ: ಚಿತ್ರದುರ್ಗ

## ೩. ಕೇಶಿರಾಜನ ಶಬ್ದಮಣಿದರ್ಪಣಂ

'ಶಬ್ದಮಣಿದರ್ಪಣಂ' ಹಳಗನ್ನಡದ ಪ್ರಪ್ರಥಮ ಸ್ವತಂತ್ರ ವ್ಯಾಕರಣಗ್ರಂಥ. ಹಲವಾರು ಪ್ರಾಚೀನ ಕವಿಗಳಲ್ಲಿನ ಕೃತಿಯ ಪದ್ಯಗಳನ್ನು ಪ್ರಯೋಗಗಳನ್ನು ಔಚಿತ್ಯಪೂರ್ಣವಾಗಿ ಬಳಸಿಕೊಂಡು ರಸಾತ್ಮಕವಾಗಿ ಗ್ರಂಥ ರಚಿಸಿದ ಕೀರ್ತಿ ಕೇಶಿರಾಜನದು. ಕ್ರಿ.ಶ. ೧೨೬೦ ರಚಿತವಾದ ರಲ್ಲಿ ರಚಿತವಾದ ಈ ಕೃತಿಗೆ ಮೊದಲು ನಿಟ್ಟೂರು ನಂಜಯ್ಯನವರು ಟೀಕು ಬರೆದಿದ್ದಾರೆ. ಅನಂತರದಲ್ಲಿ ವೀರಶೈವ ವಿದ್ವಾಂಸರಾದ ಲಿಂಗಣಾರಾಧ್ಯ ಎಂಬುವರು ಕೇಶಿರಾಜನ ಮೂಲಸೂತ್ರದಲ್ಲಿನ ವೃತ್ತಿಯನ್ನು ಹಾಗೂ ಪ್ರಯೋಗಭಾಗವನ್ನು ಸ್ವೇಚ್ಛೆಯಾಗಿ ಬದಲಿಸಿದ್ದಾರೆ.ಇದು ಮೂಲ ಕೃತಿಗೆ ಚ್ಯುತಿತಂದಿದೆಯಾದರೂ ಲಿಂಗಣಾರಾಧ್ಯನ ವಿದ್ವತ್ ಪ್ರದರ್ಶನದ ದಾಖಲೆಯೂ ಹೌದು.

ಕೇಶಿರಾಜನ 'ಶಬ್ದಮಣಿದರ್ಪಣಂ' ಹಲವಾರು ಕಾರಣಗಳಿಂದ ವಿಶಿಷ್ಟವಾದ ವ್ಯಾಕರಣ ಗ್ರಂಥ. ಆದರೆ ಈ ಗ್ರಂಥ ಬೆಳಕಿಗೆ ಬರಲು ವಿದೇಶಿ ವಿದ್ವಾಂಸರೇ ಬರಬೇಕಾಯಿತು. ಈ ಗ್ರಂಥವನ್ನು ವಿದೇಶಿ ವಿದ್ವಾಂಸರಾದ ಜಾನ್ ಗ್ಯಾರೆಟ್, ಕಿಟ್ಟೆಲ್ ಅವರೇ ಅಲ್ಲದೇ ಡಿ.ಎಲ್.ಎನ್, ಡಿ.ಕೆ.ಭೀಮಸೇನರಾವ್ ಮೊದಲಾದ ದೇಶಿಯ ವಿದ್ವಾಂಸರೂ, ವಿದ್ವತ್ ಸಂಸ್ಥೆಗಳೂ ಸಹ ಪರಿಷ್ಕರಣ ಕಾರ್ಯ ನಿರ್ವಹಿಸಿದವು. ಇವುಗಳ ಫಲಿತವಾಗಿ ಇಂದು ಕೇಶಿರಾಜನ 'ಶಬ್ದಮಣಿದರ್ಪಣಂ' ಶುದ್ಧರೂಪದಲ್ಲಿ ಓದುಗರ ಕೈಸೇರಿರುವುದು ಸಂತಸದ ಸಂಗತಿ.

'ಶಬ್ದಮಣಿದರ್ಪಣಂ' ಮೊದಲಬಾರಿಗೆ ಜಾನ್ ಗ್ಯಾರೆಟ್‌ನಿಂದ ಪರಿಷ್ಕೃತಗೊಂಡಿತು. ಜಾನ್ ಗ್ಯಾರೆಟ್‌ನ ಆವೃತ್ತಿಯ ಬಗ್ಗೆ ಡಿ.ಎಲ್.ಎನ್ - "ಅದು ಮೊದಲನೆಯ ಸಲ ಅಚ್ಚಾದುದು ಕ್ರಿ.ಶ.೧೮೬೮ರಲ್ಲಿ; ಬೆಂಗಳೂರಿನಲ್ಲಿರುವ ಮೈಸೂರು ಸರ್ಕಾರದ ಮುದ್ರಣಾಲಯದಲ್ಲಿ ಆಗ ವಿದ್ಯಾಭ್ಯಾಸ ಇಲಾಖೆಯ ಮುಖ್ಯಾಧಿಕಾರಿಯಾಗಿದ್ದ ಜೆ.ಗ್ಯಾರೆಟ್ (J.Garrett) ಅವರು ಇದರ ಸಂಪಾದಕರು. ಇದಕ್ಕೆ ಅವರು ಬರೆದಿದ್ದ ೨ ಪುಟಗಳಷ್ಟು ಇಂಗ್ಲಿಷಿನ ಮುನ್ನುಡಿಯಲ್ಲಿ (Advertisement) ದೇಶಿಯ ಪಂಡಿತರ ಮನ್ನಣೆಗೆ ಇಷ್ಟರಮಟ್ಟಿಗೆ ಪಾತ್ರವಾಗಿರುವ ಈ ಗ್ರಂಥ ಇದುವರೆಗೆ ಅಚ್ಚಾಗದೆ ಇರುವುದು ಗಮನಾರ್ಹವಿಷಯ ಎಂಬ ವಾಕ್ಯವಿದೆ. ಇದರಲ್ಲಿನ ಒಟ್ಟು ಪುಟಗಳು ಕೌನ್ ಅ ೬+ ೩೨೧; ಸೂತ್ರ, ಟೀಕೆ, ವೃತ್ತಿ, ಪ್ರಯೋಗ- ಈ ಕ್ರಮದಲ್ಲಿ ಇದು ಮುದ್ರಿತವಾಗಿದೆ. ಇಲ್ಲಿರುವ ಟೀಕೆ ನಿಟ್ಟೂರು ನಂಜಯ್ಯನ ಟೀಕೆಯನ್ನು ಬಲುಮಟ್ಟಿಗೆ ಹೋಲುತ್ತದೆ. ವೃತ್ತಿ, ಪ್ರಯೋಗಗಳಲ್ಲಿ ತುಂಬ ವ್ಯತ್ಯಾಸಗಳಿವೆ. ಪ್ರತಿಯೊಂದು ಪುಟದಲ್ಲಿಯೂ ಹಲವು ಬಗೆಯಾದ ಸ್ಖಾಲಿತ್ಯಗಳು ಹೇರಳವಾಗಿವೆ. ತೀರ ಅಶುದ್ಧವಾದ ಹಸ್ತಪ್ರತಿಯೊಂದರ ಬೆಲೆಯನ್ನು ಮಾತ್ರ ಈ ಮುದ್ರಣಕ್ಕೆ ಕೊಡಬಹುದು"[೧] ಎಂದಿದ್ದಾರೆ.

ಕಿಟ್ಟೆಲ್ ಈ ಹಿಂದೆ ಜಾನ್ ಗ್ಯಾರೆಟ್‌ನ ಆವೃತ್ತಿಯಲ್ಲಿದ್ದ ಹಲವು ದೋಷಗಳನ್ನು ಪರಿಹರಿಸುವ ಪ್ರಯತ್ನವಾಗಿ ೧೮೭೨ ರಲ್ಲಿ 'ಶಬ್ದಮಣಿದರ್ಪಣಂ' ಗ್ರಂಥವನ್ನು ಸಂಪಾದಿಸಿ

---

೧. ಡಿ.ಎಲ್.ನರಸಿಂಹಾಚಾರ್, ಶಬ್ದಮಣಿದರ್ಪಣಂ, ಪ್ರಸ್ತಾವನೆ, ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್‌ಹೌಸ್, ನಾಲ್ಕನೆಯ ಮುದ್ರಣ, ೧೯೭೧, ಪುಟ-೯

ಹೊರತಂದನು. ತನಗೆ ದೊರೆತ ಹಲವು ಹಸ್ತಪ್ರತಿಗಳ ಸಹಾಯದಿಂದ ಅವುಗಳಲ್ಲಿರುವ ಸಾಮ್ಯವೈಷಮ್ಯಗಳನ್ನು ತಾಳೆನೋಡಿ ಆದಷ್ಟು ಶುದ್ಧಪರಿಷ್ಕರಣವನ್ನು ಹೊರತರುವಲ್ಲಿ ಕಿಟ್ಟೆಲ್ ಯಶಸ್ವಿಯಾದರು. ದ್ರಾವಿಡ ಭಾಷಾಪರಿಣಿತನಾದ ಕಿಟ್ಟೆಲ್ ಪ್ರಸ್ತುತ ಗ್ರಂಥದ ಸರಿತಪ್ಪುಗಳನ್ನು ಇತರ ದ್ರಾವಿಡಭಾಷೆಗಳೊಂದಿಗೆ ತಾಳೆನೋಡಿ, ಈ ಇದ್ದ ದೋಷಗಳನ್ನು ಪರಿಹರಿಸುವ ಪ್ರಯತ್ನಮಾಡಿದನು. ಮಂಗಳೂರಿನ ಬಾಸೆಲ್ ಮಿಶನರಿಯಿಂದ ಹೊರಬಂದ ಈ ಆವೃತ್ತಿಗೆ ಕಿಟ್ಟೆಲ್ (PREFACE) ಇಂಗ್ಲಿಷಿನಲ್ಲಿ ಬರೆದಿರುವ ಪೀಠಿಕಾಭಾಗದಲ್ಲಿ ಕೇಶಿರಾಜನ ಹೆಸರು, ಕಾಲ, ವಂಶಾವಳಿ ಬಗ್ಗೆ ಹಾಗೂ ಟೀಕಾಕಾರನಾದ ನಿಟ್ಟೂರು ನಂಜಯ್ಯನ ಬಗ್ಗೆ ಚರ್ಚಿಸಿದ್ದಾನೆ.(ಕಿಟ್ಟೆಲ್ ನಿಟ್ಟೂರು ನಂಜಯ್ಯನನ್ನು ನಿಷ್ಠೂರ ನಂಜಯ್ಯ ಎಂದು ಗ್ರಹಿಸಿರುವುನ್ನು ನೆನೆಯಬಹುದು.) ಯಾವ ದೇಶಿಯ ಹಾಗೂ ವಿದೇಶಿಯ ವಿದ್ವಾಂಸರ ನೆರವು ಪಡೆಯದೆ ಕಿಟ್ಟೆಲ್ ಕೈಗೊಂಡ ಏಕಾಂಗ ಸಾಹಸಕಾರ್ಯ ಇದಾಗಿದೆ. ಸೂತ್ರ, ಪದಚ್ಛೇದ, ಅನ್ವಯ, ಟೀಕು, ವೃತ್ತಿ, ಪ್ರಯೋಗ– ಅನುಕ್ರಮದಲ್ಲಿ ನಿರೂಪಿಸಲ್ಪಟ್ಟು, ಸೂತ್ರದ ಬಲಭಾಗದಲ್ಲಿ ಆಂಗ್ಲದಲ್ಲಿ ಸೂತ್ರದ ಅರ್ಥವನ್ನು ನೀಡಲಾಗಿದೆ. ಕೆಲವೆಡೆ ಟೀಕುವಿನ ತರುವಾಯ 'ವಿಚಾರಂ' ಎಂಬಲ್ಲಿ ಅಗತ್ಯವಿರುವ ಹೆಚ್ಚಿನ ವಿವರಣೆಯನ್ನು ನೀಡಲಾಗಿದೆ. ಅಗತ್ಯವಿದ್ದೆಡೆ ಅಡಿಟಿಪ್ಪಣಿಯಲ್ಲಿ ಪಾಠಾಂತರಗಳನ್ನು ಸೂಚಿಸಿದೆ. ಗ್ರಂಥಾಂತ್ಯದ (APPENDIX) ಅನುಬಂಧದಲ್ಲಿ 'ಇತರ ಪಾಠಾಂತರಗಳ್' ಎಂದು ಹಿಂದಿನ ಎರಡೂ ಪ್ರತಿಗಳ ಪಾಠಾಂತರಗಳನ್ನು ತೋರಿಸಲಾಗಿದೆ. (MC-MD ಪ್ರತಿ) ಅಂತಿಮವಾಗಿ ಶುದ್ಧಪತ್ರಂ (ADDENDA AND CORRIGENDA) ನೀಡಿ ಗ್ರಂಥಸಮಾಪ್ತಿ ಮಾಡಲಾಗಿದೆ. ಇದಾದ ಕೆಲವು ವರ್ಷಗಳಲ್ಲಿ ಕಿಟ್ಟೆಲ್ ತಾನು ಸಂಪಾದಿಸಿದ ಕೃತಿಯನ್ನು ಪುನಃ ಪರಿಷ್ಕರಿಸಿ ೧೮೯೯ ರಲ್ಲಿ ಪ್ರಕಟಿಸಿದನು. ತದನಂತರ ೧೯೨೦ ರಲ್ಲಿ ಪಂಜೆ ಮಂಗೇಶರಾಯರ ಸಂಪಾದಕತ್ವದಲ್ಲಿ ಇದು ಮರುಮುದ್ರಣಗೊಂಡಿತು. ಇದರಲ್ಲಿ 'ಶಬ್ದಸ್ಮೃತಿ' ಹಾಗೂ 'ಭಾಷಾಭೂಷಣ'ದ ಸಂವಾದಿ ಪದ್ಯಗಳನ್ನು ಅಡಿಟಿಪ್ಪಣಿಯಲ್ಲಿ ನೀಡಿವುದರೊಂದಿಗೆ ಕಿಟ್ಟೆಲ್ ಸಂಪಾದಕತ್ವದಲ್ಲಿನ ಕೆಲವು ದೋಷಗಳನ್ನು ತಿದ್ದಿ ಪರಿಷ್ಕರಿಸಲಾಯಿತು. ಹೀಗೆ ಕಿಟ್ಟೆಲ್ ನಿಂದ ಸಂಪಾದಿತವಾದ 'ಶಬ್ದಮಣಿದರ್ಪಣಂ'ವು ಆ ಕಾಲದ ಉತ್ತಮ ಪರಿಷ್ಕರಣ ಎಂಬ ಹೆಗ್ಗಳಿಕೆಯಿಂದ ವಿದ್ವಜ್ಜನರ ಪ್ರೀತಿಗೆ ಪಾತ್ರವಾಯಿತು.

೧೯೨೦ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ಇವರು ಮೈಸೂರು ಓರಿಯಂಟಲ್ ಲೈಬ್ರರಿಯಲ್ಲಿರುವ ೩ ಓಲೆಪ್ರತಿ ಸಹಾಯದಿಂದ ಹಾಗೂ ಕಿಟ್ಟೆಲ್ ನ ೨ ಅಚ್ಚಾದ ಪುಸ್ತಕಗಳ ಸಹಾಯದಿಂದ ಸುಧಾರಿತ ಆವೃತ್ತಿಯನ್ನು ಹೊರತಂದಿತು. ೧೯೩೮ ರಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯ ಎ.ವೆಂಕಟರಾವ್ ಮತ್ತು ಎಚ್.ಶೇಷ ಅಯ್ಯಂಗಾರ್ ರ ಸಂಪಾದಕತ್ವದಲ್ಲಿ 'ಶಬ್ದಮಣಿದರ್ಪಣಂ' ಗ್ರಂಥವನ್ನು ಪ್ರಕಟಿಸಿತು. ಈ ಹಿಂದೆ ಪ್ರಕಟವಾಗಿದ್ದ ಎಲ್ಲಾ ಕೃತಿಗಳಲ್ಲಿದ್ದ ನಿಟ್ಟೂರು ನಂಜಯ್ಯನ ಟೀಕುವನ್ನು ಬಿಟ್ಟು, ಲಿಂಗಣಾರಾಧ್ಯ ರಚಿಸಿದ ಟೀಕುವಿನೊಂದಿಗೆ ಇದನ್ನು ಸಂಪಾದಿಸಲಾಯಿತು. ಈ ಕೃತಿಯ ರಚನೆಯ ಮಹತ್ತ್ವವನ್ನು ಕುರಿತು, ಕೃತಿಗೆ 'ಅವತರಣಿಕೆ' ಬರೆದಿರುವ ಎಚ್.ಚೆನ್ನಕೇಶವ ಅಯ್ಯಂಗಾರ್ ಹೇಳುವಂತೆ–" ಈ ಮುದ್ರಣದಲ್ಲಾದರೋ ಕೇಶಿರಾಜನ ವೃತ್ತಿಗೆ ಬದಲು ಲಿಂಗಾಣಾರಾಧ್ಯನ ವೃತ್ತಿಯನ್ನು ಕೊಟ್ಟಿದೆ; ಸೂತ್ರಕಾರನ ವೃತ್ತಿಗೆ ಬದಲಾಗಿ ತನ್ನದೇ ಬೇರೆ ವೃತ್ತಿಯನ್ನು ದಿಟ್ಟತನದಿಂದ ಬರೆದ ಲಿಂಗಣಾರಾಧ್ಯನ ವ್ಯಾಖ್ಯಾನದಲ್ಲಿ ವಿಶೇಷಗುಣವೇನಿರಬಹುದೆಂದು ಕುತೂಹಲ ಪರರಾದ ವಾಚಕರು ಈ ಮುದ್ರಣದಿಂದ ಅರಿಯಬಹುದು"[೨]. ಈ ಕೃತಿಯ ಪರಿಷ್ಕರಣ ಕಾರ್ಯವನ್ನು ಕುರಿತು– "ದರ್ಪಣ ಸೂತ್ರಗಳ

---

೨. ಎಚ್.ಚೆನ್ನಕೇಶವ ಅಯ್ಯಂಗಾರ್, ಶಬ್ದಮಣಿದರ್ಪಣಂ, ಅವತರಣಿಕೆ ಮದ್ರಾಸ್ ವಿಶ್ವವಿದ್ಯಾಲಯ, ಪ್ರಥಮ ಮುದ್ರಣ ೧೯೩೮, ಪುಟ–೧

ವರ್ಣಾನುಕ್ರಮಣಿಕೆಯೊಡನೆ ಸೂತ್ರಗಳಲ್ಲಿಯ ಸಾಮಾನ್ಯಶಬ್ದಗಳ, ಶಾಸ್ತ್ರೀಯ ಶಬ್ದಗಳ, ಉದಾಹೃತ ಪದ್ಯಗಳ- ಪದ್ಯಭಾಗಗಳ, ವೃತ್ತಿಯಲ್ಲಿ ಪ್ರಯೋಗಿಸಿರುವ ಪದಗಳ ಅಕಾರಾದ್ಯನುಕ್ರಮಣಿಕೆಗಳನ್ನು ಕೊಟ್ಟಿದೆ. ಉದಾಹೃತ ವಾಕ್ಯಗಳಿಗೆ ಸಾಧ್ಯವಾದ ಮಟ್ಟಿಗೆ ಸುಮಾರು ಇಪ್ಪತ್ತು ಆಕರಗಳನ್ನು ಸೂಚಿಸಿದೆ. ಅಲ್ಲದೆ ಹಲಹಲವು ಶಬ್ದಗಳ ಅರ್ಥವನ್ನೂ ಕಾಣಿಸಿದೆ. ಇವುಗಳ ಜೊತೆಗೆ 'ಶಬ್ದಮಣಿದರ್ಪಣಂ'ದ ಸೂತ್ರಗಳಿಗೆ ಸಂವಾದಿಯಾದ 'ಶಬ್ದಸ್ಮೃತಿ' -ಭಾಷಾಭೂಷಣಗಳ ಸೂತ್ರಗಳನ್ನೂ, ಕಾತಂತ್ರ ಸೂತ್ರಗಳ- ಇತರ ಸಂಸ್ಕೃತ ಗ್ರಂಥಗಳಲ್ಲಿರುವ

ಸೂತ್ರಗಳ- ಅನುವಾದವನ್ನೂ, ಕೇಶಿರಾಜನ ಪ್ರಯೋಗ ವಿಶೇಷಗಳನ್ನೂ, ಬೇರೆ ಬೇರೆ ಪರಿಶಿಷ್ಟಗಳಲ್ಲಿ ಕೊಟ್ಟಿದೆ. ಕಡೆಯದಾಗಿ ವ್ಯಾಸಂಗೇಚ್ಛುಗಳಿಗೆ ಸುಕರವಾಗಲೆಂದು ಈ ಮುದ್ರಣದ *ಸೂತ್ರ ಪದ್ಯ ಸಂಖ್ಯೆಗಳ ಸಾಲಿನಲ್ಲಿ ಮತ್ತೆರಡು ಮುದ್ರಣಗಳಲ್ಲಿರುವ ಸಂಖ್ಯಾನುಕ್ರಮವನ್ನು ಪಟ್ಟಿಯ ರೂಪದಲ್ಲಿ ಕಾಣಿಸಿ, ೯ನೆಯ ಪರಿಶಿಷ್ಟವಾಗಿ ಕೊಟ್ಟಿದೆ",[೩] ಜೊತೆಗೆ ಅವತರಣಿಕೆಯಲ್ಲಿ ಲಿಂಗಾಣಾರಾಧ್ಯನ ಪರಿಚಯ, ಆತ ಕೇಶಿರಾಜನ ಸೂತ್ರಕ್ಕೆ ರಚಿಸಿರುವ 'ಸೂತ್ರಾನ್ವಯ ರತ್ನಮಾಲೆ'ಯ ವಿಶೇಷಗಳು, ಕೇಶಿರಾಜನ ಕವಿಕಾವ್ಯವಿಚಾರ, ಕೃತಿಯ ಪ್ರಯೋಗಕ್ಕಾಗಿ ಕೇಶಿರಾಜ ಬಳಸಿಕೊಂಡಿರುವ ಕಾವ್ಯ ತುಣುಕುಗಳು ಯಾವ ಕೃತಿಯನ್ನು ಕುರಿತವು, ಎಂಬುದನ್ನು ತಿಳಿಸುವ ಪ್ರಯತ್ನ, ಕೃತಿರಚನೆಗೆ ಕಾರಣ, ಕೆಲ ಸಂಸ್ಕೃತ ಕೃತಿಗಳಲ್ಲಿನ ಸಾಮ್ಯ-ವೈಷಮ್ಯ ಹಾಗೂ ಪ್ರಭಾವ, ಗ್ರಂಥದಲ್ಲಿ ಬರುವ ಹಲಕೆಲವು ವಿಚಾರಗಳನ್ನು ಸವಿವರವಾಗಿ ಚರ್ಚೆಮಾಡಲಾಗಿದೆ. ಅಂದರೆ ನಾಮಪ್ರಕರಣ, ಅವ್ಯಯ ಪ್ರಕರಣ, ಕನ್ನಡ ಅಸಾಧಾರಣಲಕ್ಷಣ... ಇತ್ಯಾದಿ ಇದರೊಂದಿಗೆ ಕನ್ನಡ ಭಾಷೆಯ ಕೆಲವು ಇತರ ವೈಲಕ್ಷಣ್ಯಗಳು, ಕೇಶಿರಾಜನ ಕಾಲದಲ್ಲಿ ಕನ್ನಡದ ಸ್ಥಿತಿಯ ಬಗೆಗಿನ ವಿಚಾರವನ್ನು ಅವತರಣಿಕೆಯಲ್ಲಿ ಸುದೀರ್ಘವಾಗಿ ನೀಡಲಾಗಿದೆ. ಗ್ರಂಥಾರಂಭದಲ್ಲಿ ನಾಲ್ಕು ಪುಟಗಳಲ್ಲಿ ತಿದ್ದುಪಡಿ ನೀಡಲಾಗಿದೆ. ಗ್ರಂಥದ ವಿಷಯಸೂಚಿಯಲ್ಲಿ ೩೪೩ ಸೂತ್ರದಲ್ಲಿರುವ ಸಾರವನ್ನು ಸೂತ್ರಾನುಕ್ರಮಣಿಕೆಯಲ್ಲಿ ಸಂಕ್ಷಿಪ್ತವಾಗಿ ನೀಡಲಾಗಿದೆ. ಇದು ಈ ಹಿಂದೆ ಪರಿಷ್ಕೃತಗೊಂಡ ಕೃತಿಗಳಿಗಿಂತ ಸ್ವಲ್ಪ ವಿಶಿಷ್ಟವಾಗಿ ತೋರುತ್ತದೆ. ಗ್ರಂಥಾಂತ್ಯದಲ್ಲಿ ಕೃತಿಯ ಓದಿಗೆ ಸಹಾಯವಾಗುವಂತೆ ೯ ಪರಿಶಿಷ್ಟಗಳನ್ನು ನೀಡಲಾಗಿದೆ. ಹೀಗೆ ಮದ್ರಾಸ್ ವಿಶ್ವವಿದ್ಯಾನಿಲಯದಿಂದ ಹೊರಬಂದ ಈ ಪರಿಷ್ಕೃತ ಆವೃತ್ತಿ ಈ ಹಿಂದೆ ಅಚ್ಚಾಗಿದ್ದ ಎಲ್ಲ ಪ್ರಕಟಣೆಗಿಂತ ಬೃಹತ್ತಾಗಿದ್ದು ಹಲವಾರು ವಿಶಿಷ್ಟತೆಗಳಿಂದ ಕೂಡಿದ್ದಾಗಿದೆ.

'ಶಬ್ದಮಣಿದರ್ಪಣಂ'ದ ಪಾಠಗಳ ವಿಚಾರವನ್ನು ಕುರಿತಾಗಿ ಡಿ.ಕೆ.ಭೀಮಸೇನರಾಯರು 'ಶಬ್ದಮಣಿದರ್ಪಣದ ಪಾಠಾಂತರಗಳನ್ನು ಮತ್ತು ಅನುಭವಾಮೃತವೂ ಹರಿಕಥಾಮೃತಸಾರವೂ' ಎಂಬ ಕೃತಿಯನ್ನು ೧೯೫೧ ರಲ್ಲಿ ಪ್ರಕಟಿಸಿದರು. ಇದು ೩ ಉಪನ್ಯಾಸಗಳ ಸಾರಮಾಲೆ. ಇದರಲ್ಲಿ ಮೊದಲೆರಡು ಉಪನ್ಯಾಸಗಳು ಮಾತ್ರ 'ಶಬ್ದಮಣಿದರ್ಪಣ'ಕ್ಕೆ ಸಂಬಂಧಿಸಿದ್ದಾಗಿದೆ. ಮೂರನೆಯ ಉಪನ್ಯಾಸ ಮಹಾಲಿಂಗರಂಗನ 'ಅನುಭವಾಮೃತ'ವನ್ನು ಕುರಿತದ್ದಾಗಿದೆ. ಡಿ.ಕೆ.ಭೀಮಸೇನರಾಯರು ತಮಗೆ ದೊರೆತ ಉಸ್ಮಾನಿಯ ವಿಶ್ವವಿದ್ಯಾನಿಲಯದ ಹಸ್ತಲಿಖಿತ ಪುಸ್ತಕಗಳ ಸಂಗ್ರಹದಲ್ಲಿ ದೊರೆತ ತಾಡವೋಲೆಯ ಸಹಾಯದಿಂದ ಈ ಪರಿಷ್ಕರಣ ಕಾರ್ಯ ಕೈಗೊಂಡಿದ್ದಾರೆ"[೪]. ಸೂತ್ರಗಳ ಪಾಠಕ್ರಮದಲ್ಲಿಯೂ ವೃತ್ತಿಯ ಅರ್ಥವಿವರಣೆಯೂ ಅನೇಕ

---

೩. ಎಚ್.ಚೆನ್ನಕೇಶವ ಅಯ್ಯಂಗಾರ್, ಶಬ್ದಮಣಿದರ್ಪಣಂ, ಅವತರಣಿಕೆ ಮದ್ರಾಸ್ ವಿಶ್ವವಿದ್ಯಾಲಯ, ಪ್ರಥಮ ಮುದ್ರಣ ೧೯೩೮, ಪುಟ-೨

೪. ಆರ್.ಎಸ್.ಪಂಚಮುಖಿ, ಶಬ್ದಮಣಿದರ್ಪಣದ ಪಾಠಾಂತರಗಳು ಮತ್ತು ಅನುಭವಾಮೃತವೂ ಹರಿಕಥಾಮೃತ ಸಾರವು, ಮುನ್ನುಡಿ ಕನ್ನಡ ರಿಸರ್ಚ್ ಇನ್ಸ್ಟಿಟ್ಯೂಟ್, ಧಾರವಾಡ, ಪ್ರಥಮ ಮುದ್ರಣ, ೧೯೫೧, ಪುಟ-೧

ಉಪಯುಕ್ತವಾದ ವ್ಯತ್ಯಾಸವನ್ನು ನೋಡಿ ಹೊಸಪಾಠ ಮತ್ತು ವೃತ್ತಿಯುಳ್ಳ 'ಶಬ್ದಮಣಿದರ್ಪಣ' ಗ್ರಂಥವನ್ನು ವಿದ್ವಾಂಸರ ಅವಗಾಹನೆಗೆ ತರುವ ಉದ್ದೇಶದಿಂದ ವ್ಯಾಖ್ಯಾತರು ತಮ್ಮ ಉಪನ್ಯಾಸಕ್ಕೆ ಅದನ್ನೇ ವಿಷಯವಾಗಿ ಆರಿಸಿಕೊಂಡರು" ಎಂದು ಕೃತಿಯ ಉದ್ದೇಶವನ್ನು ಕುರಿತು ಕೃತಿಗೆ ಮುನ್ನುಡಿ ಬರೆದಿರುವ ಆರ್.ಎಸ್.ಪಂಚಮುಖಿ ಅವರು ತಿಳಿಸಿದ್ದಾರೆ. ಡಿ.ಕೆ. ಭೀಮಸೇನರಾಯರು ತಮಗೆ ದೊರೆತಿರುವ ಹಸ್ತಪ್ರತಿ ಈವರೆಗೆ ದೊರೆತಿರುವ ಹಸ್ತಪ್ರತಿಗಳಿಗಿಂತ ಪ್ರಾಚೀನವಾದುದು ಹಾಗೂ ಮೂಲಕ್ಕೆ ಹತ್ತಿರವಾದುದು ಎಂಬ ಆಧಾರದಿಂದ ಮೂಲದ ಅನುಕ್ರಮದಲ್ಲಿ ಸೂತ್ರ, ವೃತ್ತಿ, ಪ್ರಯೋಗಗಳನ್ನು ಇತರರು ಅನುಸರಿಸಬೇಕೆಂದು ತಿಳಿಸಿರುವುದು ವೈಶಿಷ್ಟ್ಯಪೂರ್ಣವಾಗಿದೆ. ಇದು ವಿದ್ವಾಂಸರಲ್ಲಿ ಚರ್ಚಾಸ್ಪದ ಸಂಗತಿಯಾಗಿದೆಯಾದರೂ ಡಿ.ಕೆ.ಭೀಮಸೇನರಾಯರ ಈ ಆವೃತ್ತಿ ಸಂಶೋಧನಾ ಕ್ಷೇತ್ರದಲ್ಲೊಂದು ಹೊಸ ಹೆಜ್ಜೆಯಾಗಿದೆ.

ತರುವಾಯ ಡಿ.ಎಲ್.ನರಸಿಂಹಾಚಾರ್ ಅವರು ೧೯೫೪ ರಲ್ಲಿ ೪ ಪ್ರತಿಗಳ ಸಹಾಯದಿಂದ 'ಶಬ್ದಮಣಿದರ್ಪಣ' ಕೃತಿಯನ್ನು ಸಂಪಾದನೆ ಮಾಡಿರುವರು. ಸಂಪಾದಕರು ಪ್ರಸ್ತಾವನೆಯಲ್ಲಿ ಈವರೆಗಿನ ಪರಿಷ್ಕೃತ ಆವೃತ್ತಿಗಳ ವಿವರ ಹಾಗೂ ಹಸ್ತಪ್ರತಿಗಳ ವಿನ್ಯಾಸವನ್ನು ಪರಿಚಯಿಸುತ್ತಾರೆ. ಇಲ್ಲಿಯೇ ಪ್ರಯೋಗಗಳ ಆಕರ, ಕೇಶಿರಾಜನ ವ್ಯಕ್ತಿತ್ವಗಳನ್ನು ಸಂಕ್ಷಿಪ್ತವಾಗಿ ನೀಡಲಾಗಿದೆ. ಇನ್ನು ಗ್ರಂಥದ ಬಗ್ಗೆ ಸಂಪಾದರರೇ ಹೇಳುವಂತೆ– ಈ ಹಿಂದಿನ ಪರಿಷ್ಕರಣದಲ್ಲಿದ್ದ ಅನ್ವಯ ಹಾಗೂ ಪದಚ್ಛೇದಗಳನ್ನು ಬಿಡಲಾಗಿದೆ. ಎಂದಿನಂತೆ" ಸಹಜ ಆಟಿಗಳ ಪಟ್ಟಿ, ಧಾತುಪಾಠ, ಪ್ರಯೋಗಸಾರ– ಇವುಗಳನ್ನು ಅಕಾರಾದಿಕ್ರಮದಲ್ಲಿ ಕೊಟ್ಟಿದೆ"[೫]. ಈ ಪರಿಷ್ಕೃತ ಪ್ರಕಟಣೆ ೧೯೫೪ ರಲ್ಲಿ ಮೊದಲಬಾರಿಗೆ ಹೊರಬಂದಿತು.

೧೯೬೪,೧೯೬೮,ಹಾಗೂ ೧೯೭೧ ರಲ್ಲಿ ಕ್ರಮವಾಗಿ ಮರುಮುದ್ರಣಗಳನ್ನು ಕಂಡಿತು.ಒಂದಕ್ಕಿಂತ ಒಂದು ಪರಿಷ್ಕರಣದಲ್ಲಿ ಈ ಹಿಂದೆ ಇದ್ದ ತಪ್ಪುಗಳನ್ನು ಸರಿಪಡಿಸುವುದರ ಮೂಲಕ 'ಶಬ್ದಮಣಿದರ್ಪಣ'ವನ್ನು ಉತ್ತಮವಾಗಿ ಪರಿಷ್ಕರಿಸಿದ್ದಕ್ಕೆ ಇದು ಉತ್ತಮ ನಿದರ್ಶನವಾಯಿತು.

ಎಲ್.ಬಸವರಾಜು ಅವರು ೧೯೬೮ ರಲ್ಲಿ ಸಂಪಾದಿಸಿದ 'ಶಬ್ದಮಣಿದರ್ಪಣ' ಈವರೆಗಿನ ಪ್ರಕಟಿತ ಆವೃತ್ತಿಗಳ ಸಾಲಿನಲ್ಲಿ ವಿಶಿಷ್ಟವಾದುದು. ಈವರೆಗೆ ಸುಮಾರು ೧೧ 'ಶಬ್ದಮಣಿದರ್ಪಣ'ದ ಆವೃತ್ತಿಗಳು ಹೊರಬಂದಿದ್ದವು. ಆದರೂ ಎಲ್.ಬಸವರಾಜು ಅವರ ಸಂಪಾದಿತ ಪರಿಷ್ಕರಣ ಏಕೆ ಬೇಕಿತ್ತು? ಎಂಬ ಪ್ರಶ್ನೆ ಸಾಮಾನ್ಯ ಓದುಗರಲ್ಲಿ ಉದ್ಭವಿಸುವುದು ಸಹಜ. ಇದಕ್ಕೆ ಎಲ್.ಬಸವರಾಜು ಅವರೇ ಸಕಾರಣವಾಗಿ ಉತ್ತರನೀಡಿ, ಈ ಹಿಂದಿನ ಲೋಪದೋಷಗಳನ್ನು ದರ್ಶಿಸಿ, ಅದನ್ನು ಪರಿಹರಿಸುವ ಸಲುವಾಗಿ, ಈ ಗ್ರಂಥವನ್ನು ಸಂಪಾದಿಸಿದ್ದಾರೆ. ಅವರೇ ಹೇಳುವಂತೆ–" ಇದುವರೆಗೆ ಪ್ರಕಟವಾಗಿರುವ 'ಶಬ್ದಮಣಿದರ್ಪಣ'ದ ಎಲ್ಲ ಪರಿಷ್ಕರಣಗಳ ಹಿಡಿತಕ್ಕೆ ಸಿಕ್ಕದೇ ತಪ್ಪಿಸಿಕೊಂಡಿದ್ದ ಪ್ರಾಚೀನ ಪಾಠಸಂಪ್ರದಾಯವನ್ನು

-------------------

೫. ಡಿ.ಎಲ್.ಎನ್. ಶಬ್ದಮಣಿದರ್ಪಣಂ ಪ್ರಸ್ತಾವನೆ, ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್‌ಹೌಸ್, ನಾಲ್ಕನೆಯ ಮುದ್ರಣ ೧೯೭೧, ಪುಟ ೨೭

ಪತ್ತೆಹಚ್ಚಿ, ಅದನ್ನು ಇಲ್ಲಿ ಪುನರ್ರಚಿಸಿಕೊಡಲಾಗಿದೆ"[೬]. ಇದು ಕೇವಲ ಹೇಳಿಕೆ ಮಾತ್ರವಲ್ಲ. ಇದನ್ನು ಪ್ರಮಾಣೀಕೃತ ಆಧಾರಗಳನ್ನು ಒದಗಿಸಿ, ಆಯಾ ಆವೃತ್ತಿಗಳ ದೋಷಗಳನ್ನು ತಿಳಿಸಿದ್ದಾರೆ.ಜಾನ್ ಗ್ಯಾರೆಟ್ ಮೊದಲಾದ ವಿದ್ವಾಂಸರು ಪರಿಷ್ಕರಿಸಿದ ಪ್ರಕಟಗಳಲ್ಲಿನ ದೋಷಗಳನ್ನು ತೆರೆದು ತೋರಿಸುತ್ತಾರೆ. ತಮ್ಮ ಈ ಪರಿಷ್ಕರಣಕ್ಕೆ ಒಟ್ಟು ೩೭ ಹಸ್ತಪ್ರತಿಗಳನ್ನು ಪರಿಶೀಲಿಸಿದ್ಧಾರೆ. ಈ ವಿಸ್ತೃತಸಂಖ್ಯೆಯ ಹಸ್ತಪ್ರತಿಗಳೇ ಪರಿಷ್ಕರಣೆಯ ಶುದ್ಧರೂಪವನ್ನು ತಿಳಿಸುತ್ತವೆ. ಎಲ್.ಬಸವರಾಜು ಅವರು ಗ್ರಂಥದ ಪೀಠಿಕೆಯಲ್ಲಿ ಹಸ್ತಪ್ರತಿಗಳ ವಿವರವನ್ನು ನೀಡಿದ ತರುವಾಯ, ಈ ಹಿಂದೆ ಪ್ರಕಟಗೊಂಡ ಆವೃತ್ತಿಗಳಲ್ಲಿನ ದೋಷಗಳನ್ನು ತಿಳಿಸುತ್ತಾರೆ. ಒಂದೆಡೆ, ಈ ಹಿಂದಿನ ೧೧ ಪ್ರಕಟಣೆಗಳನ್ನು, ಮತ್ತೊಂದೆಡೆ ೩೭ ಹಸ್ತಪ್ರತಿಗಳನ್ನು ಇಟ್ಟುಕೊಂಡು, ಆಯಾ ಆವೃತ್ತಿಗಳ ದೋಷಗಳನ್ನು ಆಧಾರಸಹಿತವಾಗಿ ಸಾಬೀತುಪಡಿಸುತ್ತಾರೆ. ಜೊತೆಗೆ ಈ ೩೭ ಹಸ್ತಪ್ರತಿಗಳ ಸಹಾಯದಿಂದ 'ಶಬ್ದಮಣಿದರ್ಪಣ' ದ ಮೂಲಸ್ವರೂಪವನ್ನು ಕುರಿತು ಅವರು ಸ್ಪಷ್ಟವಾಗಿ ಹೇಳಿರುವ ಮಾತುಗಳು ಹೀಗಿವೆ: "ಕೇಶಿರಾಜನ 'ಶಬ್ದಮಣಿದರ್ಪಣ' ವು ಹಳಗನ್ನಡದ ಅತ್ಯಂತ ಆಧಾರಭೂತವಾದೊಂದು ವ್ಯಾಕರಣಗ್ರಂಥ. ಅದರಲ್ಲಿ ೩೪೩ ಸೂತ್ರಗಳಿವೆ. ಅವು ಒಂದೊಂದೂ ಕಂದ್ಯಪದ್ಯದ ಬಂಧದಲ್ಲಿವೆ. ಆ ಸೂತ್ರಗಳಿಗೆ ವಿವರಣ ರೂಪವಾಗಿ ಕೇಶಿರಾಜನೇ ಬರೆದ ಗದ್ಯರೂಪದ ವೃತ್ತಿಯಿದೆ, ವೃತ್ತಿಯಲ್ಲಿ ಸೂತ್ರದ ಅರ್ಥವಿವರಣಯೇ ಅಲ್ಲದೆ, ಆ ವ್ಯಾಕರಣ ಪ್ರಕಿಯೆಗಳಿಗೆ ತಕ್ಕ ನಿದರ್ಶನಗಳನ್ನು
ಪ್ರಾಚೀನಕಾವ್ಯಗಳಿಂದ ಪದರೂಪದಲ್ಲಿಯೂ, ಪದಗುಚ್ಛರೂಪದಲ್ಲಿಯೂ, ಪದ್ಯಖಂಡ ಅಥವಾ ಇಡಿಯಾಗಿ ಪದ್ಯರೂಪದಲ್ಲಿಯೂ ಉಲ್ಲೇಖಿಸಿ ಕೊಡಲಾಗಿದೆ. ಇಂಥ ಸೂತ್ರ-ವೃತ್ತಿ-ನಿದರ್ಶನ (= ಪ್ರಯೋಗಗಳ) ಸಮುಚ್ಚಯವೇ ಕೇಶಿರಾಜನ 'ಶಬ್ದಮಣಿದರ್ಪಣ' ದ ಮೂಲಶಯ್ಯೆ. ಇದು 'ಶಬ್ದಮಣಿದರ್ಪಣ'ದ ಮೂಲಪಾಠದ ರೂಪರೇಷೆಯ ಮೊದಲಘಟ್ಟವೂ ಹೌದು[೭]" ಮುಂದುವರಿದು" ಎರಡನೇ ಘಟ್ಟದಲ್ಲಿ ಮೇಲೆ ಹೇಳಿದ ಮೂಲಪಾಠಕ್ಕೆ ೧೭ನೇ ಶತಮಾನದವನೆನ್ನಲು ಆಧಾರವಿರುವ ನಿಟ್ಟೂರು ನಂಜಯ್ಯನ ವ್ಯಾಖ್ಯಾನವು ಸೇರ್ಪಡೆಯಾಯಿತು. ನಂಜಯ್ಯನು ದರ್ಪಣದ ಸೂತ್ರಗಳನ್ನು ಪ್ರಮುಖವೆಂದು ಸರಿಯಾಗಿಯೇ ಪರಿಭಾವಿಸಿ ಅವಕ್ಕೆ ಪರಿಚ್ಛೇದವನ್ನೂ ಪದಾನ್ವಯವನ್ನೂ ಪ್ರತಿಪದಾರ್ಥ (= ಟೀಕು) ವನ್ನೂ ಕೊಟ್ಟನಲ್ಲದೆ - ಕೇಶಿರಾಜನ ವೃತ್ತಿಯನ್ನೂ ಅದರಲ್ಲಿನ ನಿದರ್ಶನ (=ಪ್ರಯೋಗ) ಭಾಗವನ್ನು ಯಥಾವತ್ತಾಗಿ- ಅಂದರೆ ತನ್ನ ಕಾಲಕ್ಕೆ ಪ್ರಚುರವಾಗಿ ಉಪಲಬ್ದವಿದ್ದ ಪಾಠದ ಅನುಸಾರವಾಗಿ- ಉಳಿಸಿಕೊಂಡು, ಅವಶ್ಯಕವೆನಿಸಿದೆಡೆ ಅಲ್ಲಲ್ಲಿ "ವಿಚಾರ" ವೆಂಬ ಶೀರ್ಷಿಕೆಯಡಿಯಲ್ಲಿ ಟಿಪ್ಪಣಿಗಳನ್ನು ಸೇರಿಸಿದನು. ನಂಜಯ್ಯನಿಗೆ ಉತ್ತರಕಾಲೀನನೆನ್ನಬಹುದಾದ ಲಿಂಗಣಾರಾಧ್ಯನೆಂಬುವನೊಬ್ಬನನ್ನು ದರ್ಪಣದ ಇನ್ನೊಬ್ಬ ವ್ಯಾಖ್ಯಾನಕಾರನೆಂಬಂತೆ - ಈಗ ಗಣನೆ ಮಾಡುವುದು ರೂಢಿಯಲ್ಲಿರುವುದಾರೂ ನಿಜವಾಗಿ ಅವನೊಬ್ಬ ವ್ಯಾಖ್ಯಾನಕಾರನಲ್ಲ. ಅವನು ನಂಜಯ್ಯನಂತೆ 'ಶಬ್ದಮಣಿದರ್ಪಣ' ದ ಸೂತ್ರಗಳಿಗೆ ಪದಚ್ಛೇದವನ್ನಾಗಲಿ, ಪದಾನ್ವಯವನ್ನಾಗಲಿ, ಪ್ರತಿಪದಾರ್ಥ (= ಟೀಕು)ವನ್ನಾಗಲಿ, ಅಲ್ಲಲ್ಲಿ ಅಚ್ಚುಕಟ್ಟಾದ "ವಿಚಾರ" ವನ್ನಾಗಲಿ ಒಳಗೊಂಡ ವ್ಯಾಖ್ಯಾಯವೆಂಥದನ್ನೂ ಬರೆಯಲಿಲ್ಲ. ಬದಲಾಗಿ ಸೂತ್ರಗಳಿಗೆ ಕೇಶಿರಾಜನು ಬರೆದಿದ್ದ "(ಅರ್ಥ)ವೃತ್ತಿ"ಯನ್ನು ಅತಿವಿಸ್ತಾರವೆಂದು ತ್ಯಜಿಸಿ-ಪ್ರಾಸಚ್ಛಂದೋನ್ವಯ ವಿನ್ಯಾಸದಿಂದ ವ್ಯತ್ಯಯಗೊಂಡಿದ್ದ ಸೂತ್ರದಲ್ಲಿನ ಪದಗಳನ್ನು ಕೇವಲ ಅನ್ವಯರೂಪದಲ್ಲಿ ಜೋಡಿಸಿ- ಅದೇ ತಾನು ದರ್ಪಣಕ್ಕೆ ಬರೆದ "ಸೂತ್ರಾನ್ವಯವೃತ್ತಿ"

---

೬. ಎಲ್.ಬಸವರಾಜು, ಕೇಶಿರಾಜನ ಶಬ್ದಮಣಿದರ್ಪಣಂ, ಅರಿಕೆ, ಶ್ರೀ ಚಿನ್ಮೂಲಾದ್ರಿ ಬೃಹನ್ಮಠ ಸಂಸ್ಥಾನ ಚಿತ್ರದುರ್ಗ, ಮೊದಲ ಮುದ್ರಣ, ೧೯೮೬, ಪುಟ ೫

೭. ಎಲ್.ಬಸವರಾಜು, ಕೇಶಿರಾಜನ ಶಬ್ದಮಣಿದರ್ಪಣಂ, ಅರಿಕೆ, ಶ್ರೀ ಚಿನ್ಮೂಲಾದ್ರಿ ಬೃಹನ್ಮಠ ಸಂಸ್ಥಾನ ಚಿತ್ರದುರ್ಗ, ಮೊದಲ ಮುದ್ರಣ, ೧೯೮೬, ಪುಟ ೯

ಎಂದು ಬೀಗಿದನು. ಈವನು 'ದರ್ಪಣ'ದ ಸೂತ್ರಗಳನ್ನು ಮಾತ್ರ ಯಥಾವತ್ತಾಗಿ ಉಳಿಸಿಕೊಂಡಿರುವನಾದರೂ ಅವುಗಳಿಗಿದ್ದ ಕೇಶಿರಾಜನ ವೃತ್ತಿಯನ್ನು ಕೈಬಿಟ್ಟು, ಆ ವೃತ್ತಿಯಲ್ಲಿದ್ದ ಪ್ರಯೋಗಭಾಗವನ್ನು ಸ್ವೇಚ್ಛೆಯಾಗಿ ತಿದ್ದಿದ ಇವನು ತನ್ನದೆಂದುಕೊಂಡಿರುವ "ಪದಾನ್ವಯವೃತ್ತಿ"ಯೂ ನಿಟ್ಟೂರು ನಂಜಯ್ಯನು ದರ್ಪಣದ ಪ್ರತಿಯೊಂದು ಸೂತ್ರಕ್ಕೂ ತನ್ನ ವ್ಯಾಖ್ಯಾನದ ಭಾಗವಾಗಿ ಕೊಟ್ಟಿರುವ "ಪದಾನ್ವಯ" ಭಾಗವೇ ಆಗಿದೆಯೆನ್ನಲೂಬಹುದು. ಹೀಗಾಗಿ ಲಿಂಗಣಾರಾಧ್ಯನು ಒಂದು ಕಡೆ ವ್ಯಾಖ್ಯಾನವನ್ನು ಸಂಗ್ರಹಿಸಿದಂತಾಯಿತಲ್ಲದೆ– ಕೇಶಿರಾಜನ ದರ್ಪಣದ ಮೂಲಪಾಠವನ್ನೇ ಕಲ್ಲಾಬಿಲ್ಲಿ ಮಾಡಿದಂತೆಯೂ ಆಯಿತು. ಅಂದರೆ ನಿಟ್ಟೂರು ನಂಜಯ್ಯನು 'ಶಬ್ದಮಣಿದರ್ಪಣ'ದ ಯಥಾಲಬ್ಧ ಪಾಠವನ್ನು ಸಂರಕ್ಷಿಸುವ ನಿರ್ಧಾರದಲ್ಲಿದ್ದನಾದರೆ– ಈ ಲಿಂಗಾಣಾರಾಧ್ಯನು ಅದನ್ನು ಸಿಕ್ಕಾಬಟ್ಟೆ ಸಂಕ್ಷೇಪಿಸುವ ಮತ್ತು ವಿಕ್ಷೇಪಿಸುವ ರಭಸದಲ್ಲಿದ್ದನೆಂದಾಯಿತು"[೮] ಎನ್ನುವುದರೊಂದಿಗೆ ಬಸವರಾಜು ಅವರು ಈಗಾಗಲೇ ಇದ್ದ ಹಲವಾರು ಊಹಾಪೋಹಾಗಳಿಗೆ ತೆರೆ ಎಳೆಯುತ್ತಾರೆ.

ಬಸವರಾಜು ಅವರು ತಮಗೆ ದೊರಕಿದ ೩೭ ಹಸ್ತಪ್ರತಿಗಳನ್ನು ಮೂಲಕ್ಕೆ ಹತ್ತಿರವಾಗುವಂತೆ ಹಾಗೂ ಪರಷ್ಕರಣಕ್ಕೆ ಅನುವಾಗುವಂತೆ ೯ ರೀತಿಯಲ್ಲಿ ವರ್ಗೀಕರಿಸಿದ್ದಾರೆ.

೧. ಕೇವಲ ಸೂತ್ರವೃತ್ತಿಪ್ರಯೋಗ ಸಹಿತವಾದ್ದು

೨–೪.ನಿಟ್ಟೂರು ನಂಜಯ್ಯನ ವ್ಯಾಖ್ಯಾನ ಸಹಿತವಾದ್ದು ( ಇದರಲ್ಲಿ ಕೇವಲ ಟೀಕು ಸಹಿತ, ಪದಾ ನ್ವಯ ಮತ್ತು ಟೀಕು ಸಹಿತ, ಪದಚ್ಛೇದ ಪದಾನ್ವಯ ಟೀಕು ಸಹಿತ ಎಂದು ಮೂರು ಬಗೆ)

೫. ಕೇವಲ ಸೂತ್ರ ಸಂಕಲನ ರೂಪವಾದ್ದು

೬. ಕೇವಲ ಸೂತ್ರ ಸಂಕಲನ– ಸಮುಚ್ಚಯವಾಕ್ಯ ಸಹಿತವಾದ್ದು

೭. ಲಿಂಗಣಾರಾಧ್ಯನ ವ್ಯಾಖ್ಯಾನಸಹಿತವಾದ್ದು

೮. ಹೈದರಾಬಾದ್ ಸಂಪ್ರದಾಯದ್ದು.

೯. ಕೇವಲ ಧಾತು ಪ್ರಕರಣವಿರುವಂಥಾದ್ದು.

ಇದು ಉಪಲಬ್ಧ ಹಸ್ತಪ್ರತಿಗಳ ವಿಂಗಡಣೆಯಾದರೆ, 'ಶಬ್ದಮಣಿದರ್ಪಣ'ದ ಮೂಲಪಾಠದ ರೂಪಾಂತರದ ಸೂಕ್ಷ್ಮದೃಷ್ಟಿಯಿಂದ ಮೂರು ಮುಖ್ಯ ಸಂಪ್ರದಾಯಗಳನ್ನು ಅನುಸರಿಸುತಾರೆ. ಅವು–

೧. ಪ್ರಾಚೀನ

೨. ಮಧ್ಯಕಾಲೀನ

೩. ಅರ್ವಾಚೀನ

ಹೀಗೆ ವಿಂಗಡಿಸಿಕೊಳ್ಳುವುದಕ್ಕೆ 'ಶಬ್ದಮಣಿದರ್ಪಣ'ದ ಹಸ್ತಪ್ರತಿಗಳ ಬಾಹುಳ್ಯವೇ ಕಾರಣ ಎನ್ನುವ ಎಲ್.ಬಸವರಾಜು ಅವರು ಮೂಲಪ್ರತಿಯಲ್ಲಿಯ ನಕಲು, ಅದರ ಮರುನಕಲುಗಳು ನಿರಂತರವಾಗಿ ಸಾಗಿದುದುರ ಫಲಿತವಾಗಿ ಬಂದಂತಹವುಗಳಾಗಿವೆ ಎಂದಿದ್ದಾರೆ. ಈ ಬಗ್ಗೆ " ಈ ವ್ಯಾಕರಣ ಗ್ರಂಥದ ಶೈಲಿಯು ಹಲವರಿಗೆ ಕ್ಲೇಶಕಾರಿಯಾಗಿಯೂ ಅತಿ

---

೮. ಎಲ್.ಬಸವರಾಜು, ಕೇಶಿರಾಜನ ಶಬ್ದಮಣಿದರ್ಪಣಂ, ಅರಿಕೆ, ಶ್ರೀ ಚಿನ್ಮೂಲಾದ್ರಿ ಬೃಹನ್ಮಠ ಸಂಸ್ಥಾನ ಚಿತ್ರದುರ್ಗ, ಮೊದಲ ಮುದ್ರಣ, ೧೯೮೬, ಪುಟ ೧೦

ವಿಸ್ತಾರವೂ ಎನಿಸಿ, ಅದನ್ನು ಸರಳೀಕರಿಸುವ ಮತ್ತು ಸಂಕ್ಷೇಪಿಸುವ ಇಚ್ಛೆ ಹುಟ್ಟಿ- ನಡೆದ ಪ್ರಯತ್ನಗಳು ಅದರ ಫಲಿತಾಂಶವೂ ಸೇರಿ -ಈ ಏಳು ಶತಮಾನಗಳ ದೀರ್ಘಾವಧಿಯಲ್ಲಿ 'ಶಬ್ದಮಣಿದರ್ಪಣ'ದ ಮೂಲಪಾಠ ಅದೆಷ್ಟು (ವಿಧವಾದ) ಪರಿವರ್ತನೆಗೆ ಒಳಗಾಯಿತೆಂಬುದನ್ನು ಊಹಿಸಿದರೆ ದಿಗ್ಭ್ರಮೆಯಾಗುವುದು"[೯] ಎನ್ನುತ್ತಾರೆ. ಹೀಗೆ ಕೇಶಿರಾಜನ ಕಾಲದಿಂದ ಪಾಠಾನುಸಾರಿಯಾಗಿ ಬಂದ ಪ್ರತಿಗಳನ್ನು ಪ್ರಾಚೀನವೆಂತಲೂ, ನಿಟ್ಟೂರ ನಂಜಯ್ಯನ ಟೀಕೆ ಅನಂತರದ ಪಾಠಾಂತರ ನಕಲನ್ನು ಮಧ್ಯಕಾಲೀನವೆಂತಲೂ, ಅಲ್ಲಿಂದೀಚಿನ ಅಂದರೆ ೧೮-೧೯ ಶತಮಾನದ ಮತ್ತಷ್ಟು ವ್ಯತ್ಯಸ್ಥವಾದ ಪಾಠವಿರುವ ಪ್ರತಿಗಳನ್ನು ಅರ್ವಾಚೀನವೆಂತಲೂ ಸಂಪಾದಕರು ವಿಂಗಡಣೆ ಮಾಡಿದ್ದಾರೆ. ಇದನ್ನು ಕೇವಲ ಕಾಲದ ದೃಷ್ಟಿಯಿಂದ ಮಾಡುವುದು ಕಷ್ಟ. ಏಕೆಂದರೆ ಎಲ್ಲ ಪ್ರತಿಕಾರನು ಕಾಲ ನಿರ್ದೇಶಿಸಿರುವುದಿಲ್ಲ. ಆದ್ದರಿಂದ ವಿಶಿಷ್ಟಪಾಠ ವೈಖರಿಯಿಂದಲೇ ಇದರ ವಿಂಗಡಣೆ ಸಾಧ್ಯ ಎಂಬುದನ್ನು ತೋರಿಸುತ್ತಾರೆ. ಇದಕ್ಕೆ ನಿದರ್ಶನವಾಗಿ ಒಂದು ಸೂತ್ರವನ್ನು ತೆಗೆದುಕೊಂಡು ತಮ್ಮ ವಾದವನ್ನು ಮತ್ತಷ್ಟು ಪುಷ್ಟೀಕರಿಸುತ್ತಾರೆ. ಈ ಮೂಲಕ "ಇದುವರೆಗೆ ಅಚ್ಚಾಗಿರುವ 'ಶಬ್ದಮಣಿದರ್ಪಣ'ದ ಎಲ್ಲ ಪರಿಷ್ಕರಣಗಳೂ ಮುಖ್ಯವಾಗಿ ಮಧ್ಯಯುಗೀನ ಪಾಠಸಂಪ್ರದಾಯದವರೆಗೆ ಮಾತ್ರ ತಮ್ಮ ಸಂಶೋಧನಾಹಸ್ತ ಚಾಚಿದ್ದು- ಅವು ಪ್ರಾಚೀನ ಪಾಠದ ಮೂಲಸೆಲೆಯನ್ನು (ಪ್ರಜ್ಞಾಪೂರ್ವಕವಾಗಿ) ಮುಟ್ಟಿಕೂಡ ನೋಡಲು ಸಮರ್ಥವಾಗಿಲ್ಲ. ೨೦ನೇ ಶತಮಾನದ ಅತ್ಯುತ್ತಮ ಪರಿಷ್ಕರಣವೆಂದು ಜನಮನ್ನಣೆ ಪಡೆದಿರುವ ಡಿ.ಎಲ್.ನರಸಿಂಹಾಚಾರ್ಯರ ಪರಿಷ್ಕರಣಕ್ಕೂ ಈ ಮಾತೇ ಯಾವ ರೀತಿಯ ತಿದ್ದುಪಡಿಯು ಇಲ್ಲದೆ ಸಲ್ಲುತ್ತದೆ"[೧೦] ಎಂಬ ನಿರ್ಧಾರವನ್ನು ಸ್ಪಷ್ಟಪಡಿಸುತ್ತಾರೆ.

ಜಾನ್ ಗ್ಯಾರೆಟ್ ಆದಿಯಾಗಿ ಈವರೆಗೆ ಪ್ರಕಟವಾಗಿರುವ ಆವೃತ್ತಿಗಳಲ್ಲಿನ ದೋಷಗಳನ್ನು ತೋರಿಸುವ ಪ್ರಯತ್ನ ಸೂಕ್ತವಾದುದಾಗಿದೆ. ಇದು ಯಾವುದೇ ಸಂಪಾದಕನ ಆದ್ಯ ಕರ್ತವ್ಯವೂ ಹೌದು. ೧೮೬೮ ರಲ್ಲಿ ಪ್ರಕಟವಾದ ಜಾನ್ ಗ್ಯಾರಟ್ ಪರಿಷ್ಕರಣದ ಬಗ್ಗೆ - ಎಲ್.ಬಸವರಾಜು ಅವರು ಹೀಗೆಂದಿದ್ದಾರೆ: "ಇವನು 'ಶಬ್ದಮಣಿದರ್ಪಣ'ದ ತನ್ನ ಪರಿಷ್ಕರಣಕ್ಕೆ ನಿಟ್ಟೂರು ನಂಜಯ್ಯನ ವ್ಯಾಖ್ಯಾನಸಹಿತವಾದ ಮಧ್ಯಯುಗೀನ ಪಾಠವನ್ನೇ ಬಳಸಿಕೊಂಡನು. ತನ್ನ ಪರಿಷ್ಕರಣಕ್ಕೆ ಒಂದೆರಡು ಪ್ರತಿಗಳನ್ನು ಮಾತ್ರ ಪ್ರತಿಷ್ಠಿತರ ಸಹಾಯದಿಂದ ಶೇಖರಿಸಿಕೊಂಡಿದ್ದನೆನಬಹುದು"[೧೧]. ಅಲ್ಲದೇ ಗ್ಯಾರೆಟ್ ತನ್ನ ಆವೃತ್ತಿಯಲ್ಲಿ " ಇಲ್ಲೆಲ್ಲಿಯೂ ಪದದಿಂದ ಪದಕ್ಕಿರುವ ಅಂತರದ ಹೊರತಾಗಿ - ಯಾವ ವಿರಾಮಚಿಹ್ನೆಯನ್ನು ಬಳಸಿಲ್ಲ. ಟೀಕಿನ ವಿಭಾಗದಲ್ಲಿ ಈ ಪದಕ್ಕೆ ಈ ಅರ್ಥವೆಂಬಲ್ಲಿಯೂ ನಡುವೆ ಸ್ವಲ್ಪ ಜಾಗಬಿಟ್ಟಿದೆಯೇ ಹೊರೆತು ಅಡ್ಡಗೀಟು ಇತ್ಯಾದಿಯಾದ ಯಾವ ಸಮೀಕರಣ ಚಿಹ್ನೆಯೂ ಇಲ್ಲ. ಅಷ್ಟೇ - ಅಲ್ಲ- "ಇದನರಿದುಪ್ರಯೋಗಿಸುವರ್ಗೆಕವಿತ್ವದೊಳ್ದೊಡಂಕಿಲ್ಲ"ವೆಂಬಥ ನಿರಂತರ ಪದಜೋಡಣೆಯ ಮುದ್ರಣ ಧಾಟಿ ಇಲ್ಲಿಯದು"[೧೨] ಜೊತೆಗೆ ಗ್ಯಾರೆಟ್ ತನ್ನ ಪರಿಷ್ಕರಣದಲ್ಲಿ ಎಲ್ಲಿಯೂ

---

೯ ಎಲ್.ಬಸವರಾಜು, ಕೇಶಿರಾಜನ ಶಬ್ದಮಣಿದರ್ಪಣಂ, ಅರಿಕೆ, ಶ್ರೀ ಚಿನ್ಮೂಲಾದ್ರಿ ಬೃಹನ್ಮಠ ಸಂಸ್ಥಾನ ಚಿತ್ರದುರ್ಗ, ಮೊದಲ ಮುದ್ರಣ, ೧೯೮೬, ಪುಟ ೧೨

೧೦ ಎಲ್.ಬಸವರಾಜು, ಕೇಶಿರಾಜನ ಶಬ್ದಮಣಿದರ್ಪಣಂ, ಅರಿಕೆ, ಶ್ರೀ ಚಿನ್ಮೂಲಾದ್ರಿ ಬೃಹನ್ಮಠ ಸಂಸ್ಥಾನ ಚಿತ್ರದುರ್ಗ, ಮೊದಲ ಮುದ್ರಣ, ೧೯೮೬, ಪುಟ ೧೭

೧೧ ಎಲ್.ಬಸವರಾಜು, ಕೇಶಿರಾಜನ ಶಬ್ದಮಣಿದರ್ಪಣಂ, ಅರಿಕೆ, ಶ್ರೀ ಚಿನ್ಮೂಲಾದ್ರಿ ಬೃಹನ್ಮಠ ಸಂಸ್ಥಾನ ಚಿತ್ರದುರ್ಗ, ಮೊದಲ ಮುದ್ರಣ, ೧೯೮೬, ಪುಟ ೧೮

೧೨ ಎಲ್.ಬಸವರಾಜು, ಕೇಶಿರಾಜನ ಶಬ್ದಮಣಿದರ್ಪಣಂ, ಅರಿಕೆ, ಶ್ರೀ ಚಿನ್ಮೂಲಾದ್ರಿ ಬೃಹನ್ಮಠ ಸಂಸ್ಥಾನ ಚಿತ್ರದುರ್ಗ, ಮೊದಲ ಮುದ್ರಣ, ೧೯೮೬, ಪುಟ ೧೮-೧೯

ಅಚಿಗಳನ್ನು ಬಳಸಿಲ್ಲ ಹಾಗೂ ಧಾತು ಪ್ರಕರಣದ ಧಾತುಪಾಠವನ್ನು ಜೋಡಿ ಅಂಕಣದಲ್ಲಿ ನೀಡಲಾಗಿದೆ. " ಏಳನೆಯದಾದ ಅಪಭ್ರಂಶ ಪ್ರಕರಣಕ್ಕೆ (ಮಾತ್ರ) ಗ್ಯಾರೆಟನು ಟಿಪ್ಪಣಿ ಬರೆದು – ತತ್ಸಮ ತದ್ಭವಗಳ ಸ್ವರೋಪವನ್ನು ವಿವರಿಸುವಾಗ – The ತದ್ಭವ class denotes word much altered : as ಗೌರಿ Gouri a daughter, from the Sauskrit word ಕುಮಾರಿ– in English we form reason from the Latin word RATIO, & C ಎನ್ನುವಲ್ಲಿ ಆ ಗ್ಯಾರೆಟನು ತನ್ನ ಆಂಗ್ಲ ಅಥವಾ ಐರೋಪ್ಯ ಒಡನಾಡಿ ಜನಾಂಗಕ್ಕೇ ಈ 'ಶಬ್ದಮಣಿದರ್ಪಣ'ವನ್ನು ಸಿದ್ಧಪಡಿಸಿ (ಪರಿಚಯಿಸಿ)ರುವಂತಿದೆ. ಮತ್ತೂ ಮುಂದುವರಿದು "Some of the ತದ್ಭವ word are derived through other languages, as we obtain TREASON from the French TRAHISON, originally taken from Latin" ಎನ್ನುವಲ್ಲಿ ಮೇಲೆ ಹೇಳಿರುವ ಸ್ವಜನ ಸಂವಾದ ಸರಣಿ ಸ್ಪಷ್ಟವಾಗಿದೆ"[೧೩] ಎಂದಿದ್ದಾರೆ. ಹೀಗಾಗಿ ಗ್ಯಾರೆಟ್‌ನ ಆವೃತ್ತಿ ವಾಸ್ತವವಾಗಿ ಐರೋಪ್ಯ ಅಭ್ಯಾಸಿಗಳನ್ನು ಉದ್ದೇಶಿಸಿ ರಚಿತವಾಗಿರುವುದಾರೂ ಅಲ್ಲಿಯೂ ಯಶಸ್ವಿಯಾಗಿಲ್ಲ. ಕಾರಣ ಅದರಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಸೂತ್ರಸೂತ್ರಕ್ಕೂ ಬರೆದ ಸಾರಾಂಶ– ಟಿಪ್ಪಣಿ– ಅಡಿಟಿಪ್ಪಣಿ ಮುಂತಾದವುಗಳು ಜೋಡಣೆಗೊಂಡಿಲ್ಲ" ಎಂದಿದ್ದಾರೆ.

ರೆವೆರೆನ್ಡ್ ಎಫ್.ಕಿಟ್ಟೆಲನ ಪರಿಷ್ಕರಣದ ಬಗ್ಗೆ ಎಲ್.ಬಸವರಾಜು ಅವರು – "ಕಿಟಲನು ಶಬ್ದಮಣಿದರ್ಪಣದ ಗಮನಾರ್ಹವಾದ ಪರಿಷ್ಕರ್ತರಲ್ಲಿ ಎರಡನೆಯವನಾದರೂ ಆ ಪರಿಷ್ಕರಣದ ಗುಣಮಟ್ಟದಿಂದ ಮೊದಲಿಗನೆಂದೇ ಗಣಿಸುವುದು ಉಚಿತ"[೧೪] ಎಂದಿದ್ದಾರೆ, ಈತ ೧೦ ಪ್ರತಿಗಳ ಸಹಾದಿಂದ ಕೃತಿರಚಿಸಿದನಾದರೂ ನಿಟ್ಟೂರು ನಂಜಯ್ಯನ ಟೀಕಿನೊಂದಿಗೆ ರಚಿತವಾದ ಈ ಪರಿಷ್ಕರಣದಲ್ಲಿ ಕಿಟೆಲನು ಮೂಲವನ್ನು ಕಂಡುಹಿಡಿಯಲು ವಿಫಲನಾಗಿರುವುದನ್ನು ತೋರಿಸಿರುವರು. ಆದ್ದರಿಂದ ಇದು ಮಧ್ಯಕಾಲೀನ ಪಾಠಸಂಪ್ರದಾಯದ ಅನುಕರಣೆ ಎಂಬುದನ್ನು ವಿದಿತಗೊಳಿಸುತ್ತಾರೆ. "ಕಿಟಲನು ಪಾಠದ ಪರಿವಿಡಿಯನ್ನೂ ಬದಲಾಯಿಸಿ ನಿಟ್ಟೂರು ನಂಜಯ್ಯನ ವ್ಯಾಖ್ಯಾನದಲ್ಲಿ ಗ್ಯಾರೆಟನು ಬಿಟ್ಟಿದ್ದ ಪದಚ್ಛೇದ– ಪದಾನ್ವಯ ಭಾಗಗಳನ್ನು ಅಧಿಕವಾಗಿ ಸೇರಿಸಿಕೊಂಡನು ಮತ್ತು ಸೂತ್ರಗಳನ್ನು ದಪ್ಪಕ್ಷರಗಳಲ್ಲಿ (ನಾಲ್ಕು ಪಾದವಾಗಿ ವಿಂಗಡಿಸಿ)ರಿಸಿ, ಪದಚ್ಛೇದ– ಪದಾನ್ವಯ– ಟೀಕು( = ಪ್ರತಿಪದಾರ್ಥ)ಗಳನ್ನು ಸಣ್ಣಕ್ಷರದಲ್ಲಿರಿಸಿ– ಮರಳಿ ವೃತ್ತಿ ಪ್ರಯೋಗಗಳನ್ನು ಸೂತ್ರದಷ್ಟೆ ದಪ್ಪಕ್ಷರಗಳಲ್ಲಿ ವಿರಳವಾಗಿ ಅಚ್ಚುಹಾಕಿಸಿದ. ಹೀಗಾಗಿ ಕಿಟಲನ ಪರಿಷ್ಕರಣದಲ್ಲಿ ನಿಟ್ಟೂರು ನಂಜಯ್ಯನ ವ್ಯಾಖ್ಯಾನವು ಗೌಣವಾಗಿಯೂ, ಕೇಶಿರಾಜನ ಸೂತ್ರವೃತ್ತಿಪ್ರಯೋಗಗಳ ಮೂಲಕೃತಿ ಪ್ರಾಧಾನವಾಗಿಯೂ ಕಾಣುವಂತಾಯಿತು. ಮತ್ತು ವೃತ್ತಿಯಲ್ಲಿದ್ದ ಪ್ರಯೋಗಭಾಗವನ್ನು ಬೇರ್ಪಡಿಸಿ ಅದನ್ನು "ಪ್ರಯೋಗಂ" ಎಂಬ ಶೀರ್ಷಿಕೆಯೊಡನೆ ವಿಂಗಡಿಸಿದ. ಕಿಟಲನ ಈ ವಿನ್ಯಾಸದಿಂದ ಐರೋಪ್ಯರಿಗೆ ಕನ್ನಡ ಭಾಷೆಯ ವ್ಯಾಕರಣವನ್ನು ತಿಳಿಯಬೇಕೆಂದಾಗ ಸೂತ್ರದ ಪದಚ್ಛೇದ–ಪದಾನ್ವಯಗಳು ಅಣಿಯಾಗಿ ದೊರೆತು, ಟಿಕಿನ ಪ್ರತಿಪದಾರ್ಥದಿಂದ ಅಧ್ಯಯನಕ್ಕೆ ಅನುಕೂಲವಾಯಿತು– ಅಷ್ಟೆ ಅಲ್ಲ– ಕಿಟೆಲನು ದರ್ಪಣದ ಪ್ರತಿಯೊಂದು ಸೂತ್ರದ ಎಡಬದಿಗೂ ಇಂಗ್ಲಿಷಿನಲ್ಲಿ ಆ ಸೂತ್ರದ ಸಾರಾಂಶವನ್ನು ಅಚ್ಚು ಹಾಕಿಸಿದ್ದು–ಅದು ಐರೋಪ್ಯರಿಗರ ಬೇಕಾದ್ದನ್ನು ಕಾಣಿಸುವ ಒಂದು

---

೧೩ ಎಲ್.ಬಸವರಾಜು, ಕೇಶಿರಾಜನ ಶಬ್ದಮಣಿದರ್ಪಣಂ, ಅರಿಕೆ, ಶ್ರೀ ಚಿನ್ಮೂಲಾದ್ರಿ ಬೃಹನ್ಮಠ ಸಂಸ್ಥಾನ ಚಿತ್ರದುರ್ಗ, ಮೊದಲ ಮುದ್ರಣ, ೧೯೮೬, ಪುಟ ೧೯

೧೪ ಎಲ್.ಬಸವರಾಜು, ಕೇಶಿರಾಜನ ಶಬ್ದಮಣಿದರ್ಪಣಂ, ಅರಿಕೆ, ಶ್ರೀ ಚಿನ್ಮೂಲಾದ್ರಿ ಬೃಹನ್ಮಠ ಸಂಸ್ಥಾನ ಚಿತ್ರದುರ್ಗ, ಮೊದಲ ಮುದ್ರಣ, ೧೯೮೬, ಪುಟ ೧೯

ಮಾಯಾಕನ್ನಡಿಯಂತಾಯಿತು. ಮತ್ತು ಧಾತುಪ್ರಕರಣದಲ್ಲಿ ಪ್ರತಿಯೊಂದು ಧಾತುವಿಗೂ ಕೇಶಿರಾಜನು ಸಂಸ್ಕೃತದಲ್ಲಿ ಕೊಟ್ಟಿದ್ದ ಅರ್ಥಕ್ಕೆ ಅದರ ಇಂಗ್ಲಿಷನ ತರ್ಜುಮೆಯನ್ನು ಮಾಡಿ ಜೋಡಿಸಲಾಯಿತು: ಬೆಕ್ಕಸಂಬಡು: ವಿಸ್ಮಯೇ: to be surprised ಎಂಬಂತೆ, ಮತ್ತು ಮುನ್ನುಡಿ ಅಡಿಟಿಪ್ಪಣಿ ಅನುಬಂಧಗಳನ್ನೆ ಇಂಗ್ಲಿಷ್ ಮಾಧ್ಯಮದಲ್ಲೇ ಒದಗಿಸಲಾಯಿತು.(ಕಿಟೆಲನು ತನ್ನ ಕ್ರಿ.ಶ.೧೮೯೯ ರ ಎರಡನೇ ಪರಿಷ್ಕರಣದಲ್ಲಿ ಮುಖ್ಯವಾಗಿ ಪ್ರಯೋಗಭಾಗವನ್ನೆಲ್ಲ ಮರಳಿ ಶುದ್ಧಿಕರಿಸಿ ಅಚ್ಚಿಸಿದನು) ಈ ಎಲ್ಲ ಕಾರಣಗಳಿಂದ ಕಿಟೆಲ್ಲನ ಪರಿಷ್ಕರಣವು ಇಂಗ್ಲಿಷ್ ಕಲಿತ ಬೆರಳಷ್ಟು ಕನ್ನಡಿಗರಿಗೆ ಗೌಣವೆಂಬಂತೆಯೂ ಸಿದ್ಧವಾಯಿತು. ಈ ರೀತಿ 'ಶಬ್ದಮಣಿದರ್ಪಣ'ದ ಪ್ರಾಚೀನ ಸಂಪ್ರದಾಯದ ಮೂಲಪಾಠವಲ್ಲವೆಂಬುದನ್ನು ಮರೆಯಬಾರದು"[೧೫] ಎಂದಿದ್ದಾರೆ.

ಡಿ.ಎಲ್.ನರಸಿಂಹಾಚಾರ್ ರ ಪರಿಷ್ಕರಣದ ಬಗ್ಗೆ ಹೇಳುತ್ತಾ–"'ಶಬ್ದಮಣಿದರ್ಪಣ'ದ ಪರಿಷ್ಕರಣ ಕ್ಷೇತ್ರದಲ್ಲಿ ದುಡಿದ ಪ್ರಮುಖರಲ್ಲಿ ಮೂರನೆಯವರು ಡಿ.ಎಲ್.ನರಸಿಂಹಾಚಾರ್ಯರು. ಇವರ ಪರಿಷ್ಕರಣ ಕನ್ನಡಿಗರನ್ನೇ ದೃಷ್ಟಿಯಲ್ಲಿರಿಸಿಕೊಂಡು ಮಾಡಿದಂಥದು. ಇದು ಇಂದಿಗೂ ಅತ್ಯಂತ ಪ್ರಚಾರದಲ್ಲಿರುವ, ಇರುವುದರಲ್ಲಿ ಒಳ್ಳೆಯ ಪರಿಷ್ಕರಣವು ಆಗಿದೆ"[೧೬] ಎಂದಿದ್ದಾರೆ. ಜೊತೆಗೆ ಡಿ.ಎಲ್.ಎನ್. ಅವರು ತಮ್ಮ ಪರಿಷ್ಕರಣ ಕಾರ್ಯದಲ್ಲಿ ಪ್ರಾಚೀನ ಪ್ರತಿ ಬಳಸಿದ್ದರೂ, ಅದು ಪ್ರಾಚೀನಪ್ರತಿ ಎಂದು ವಿಫಲರಾಗಿರುವುದನ್ನು ತಿಳಿಸುತ್ತಾರೆ. ಆದರೂ ಕಿಟ್ಟೆಲ್ಲರ ಪರಿಷ್ಕರಣದಲ್ಲಿ ಉಳಿದಿದ್ದ ಪಾಠದ ಕಂದುಕೊರೆತೆಗಳಲ್ಲಿ ಹಲವಷ್ಟನ್ನು ಸರಿಪಡಿಸುವ ಮಟ್ಟಿಗೆ ಅದು ಸಹಕಾರಿಯಾಯಿತು ಎಣ್ಣುತ್ತಾರೆ. ಡಿ.ಎಲ್.ಎನ್. ಸಿದ್ಧಪಡಿಸಿದ ಪರಿಷ್ಕರಣ ಮಧ್ಯಕಾಲೀನ ಪ್ರತಿಯನ್ನು ಅವಲಂಬಿಸಿದ್ದಾರೂ ಮೂಲಶಯ್ಯೆಯನ್ನು ಬಹುಮಟ್ಟಿಗೆ ಹೋಲುವ ಮೂಲಕ ಶುದ್ಧದಂತಾಗಿರುವುದು ಮಹತ್ತ್ವದ ಸಂಗತಿ. ಆದರೂ ಡಿ.ಎಲ್.ನರಸಿಂಹಾಚಾರ್ ರ ಈ 'ಶಬ್ದಮಣಿದರ್ಪಣ'ದ ಪರಿಷ್ಕರಣ ಚಟುವಟಿಕೆಗಳು ೧೯ನೇ ಶತಮಾನದ ಮಧ್ಯಂತರದಿಂದ ಹಿಡಿದು ೨೦ನೇ ಶತಮಾನದ ಇವತ್ತಿನವರೆಗೂ ಮಧ್ಯಯುಗೀನ ಪಾಠಸಂಪ್ರದಾಯದ ಸುತ್ತಲೇ ಪ್ರದಕ್ಷಿಣೆ ಹಾಕಿದಂತಿದೆ"[೧೭] ಎಂದಿದ್ದಾರೆ.

ಈ ಮೇಲಿನ ಎಲ್ಲಾ ಪರಿಷ್ಕರಣಗಳ ದೋಷಗಳನ್ನು ಪರಿಹರಿಸುವ ಸಲುವಾಗಿ ಹಾಗೂ ಪ್ರಾಚೀನತಮ ಪ್ರತಿಗಳಿಂದ ಶುದ್ಧರೂಪದ ಪರಿಷ್ಕರಣ ಪ್ರಕಟಿಸುವ ಅಗತ್ಯದಿಂದ ಎಲ್.ಬಸವರಾಜು ಅವರು 'ಶಬ್ದಮಣಿದರ್ಪಣ'ವನ್ನು ಸಂಪಾದಿಸುವ ಕಾರ್ಯವನ್ನು ಕೈಗೊಂಡರು. ತಮ್ಮ ಶುದ್ಧಪಾಠಾಂತರದ ನಿದರ್ಶನಕ್ಕಾಗಿ ದರ್ಪಣದ ಕೆಲವು ಸೂತ್ರಗಳು ಪ್ರಾಚೀನ, ಮಧ್ಯಕಾಲೀನ ಹಾಗೂ ಅರ್ವಾಚೀನ ಪ್ರತಿಗಳಲ್ಲಿ ಏರ್ಪಟ್ಟಿರುವ ಸ್ಥಿತ್ಯಂತರಗಳನ್ನು ಸೋದಾಹರಣವಾಗಿ ವಿಶ್ಲೇಷಿಸಿದ್ದಾರೆ. ಜೊತೆಗೆ ಈ ಪರಿಷ್ಕರಣಕ್ಕಾಗಿ ಬಳಸಿರುವ ಒಟ್ಟು ೩೭ ಪ್ರತಿಗಳನ್ನು ಎಂಟುಭಾಗದಲ್ಲಿ ಪಟ್ಟಿಮಾಡಿ ಅದರ ಸ್ವರೂಪವಿನ್ಯಾಸವನ್ನು ತಿಳಿಸಿದ್ದಾರೆ.

---

೧೫ ಎಲ್.ಬಸವರಾಜು, ಕೇಶಿರಾಜನ ಶಬ್ದಮಣಿದರ್ಪಣಂ, ಅರಿಕೆ, ಶ್ರೀ ಚಿನ್ಮೂಲಾದ್ರಿ ಬೃಹನ್ಮಠ ಸಂಸ್ಥಾನ ಚಿತ್ರದುರ್ಗ, ಮೊದಲ ಮುದ್ರಣ, ೧೯೮೬, ಪುಟ ೨೦

೧೬ ಎಲ್.ಬಸವರಾಜು, ಕೇಶಿರಾಜನ ಶಬ್ದಮಣಿದರ್ಪಣಂ, ಅರಿಕೆ, ಶ್ರೀ ಚಿನ್ಮೂಲಾದ್ರಿ ಬೃಹನ್ಮಠ ಸಂಸ್ಥಾನ ಚಿತ್ರದುರ್ಗ, ಮೊದಲ ಮುದ್ರಣ, ೧೯೮೬, ಪುಟ ೨೦

೧೭ ಎಲ್.ಬಸವರಾಜು, ಕೇಶಿರಾಜನ ಶಬ್ದಮಣಿದರ್ಪಣಂ, ಅರಿಕೆ, ಶ್ರೀ ಚಿನ್ಮೂಲಾದ್ರಿ ಬೃಹನ್ಮಠ ಸಂಸ್ಥಾನ ಚಿತ್ರದುರ್ಗ, ಮೊದಲ ಮುದ್ರಣ, ೧೯೮೬, ಪುಟ ೨೧

ಎಲ್.ಬಸವರಾಜು ಅವರು ಈ ಪರಿಷ್ಕರಣಕಾರ್ಯಕ್ಕಾಗಿ ೫ ಪ್ರಾಚೀನ ಸಂಪ್ರದಾಯದ ಪ್ರತಿಗಳನ್ನು ಪರಮಾಧಾರವಾಗಿಟ್ಟುಕೊಂಡು ಉಳಿದ ೩೨ ಪ್ರತಿಗಳನ್ನು ಸಂದರ್ಭೋಚಿತವಾಗಿ ಬಳಸಿಕೊಂಡಿದ್ದಾರೆ. ತಮ್ಮ ಆವೃತ್ತಿ ಎಲ್ಲಾ ಆವೃತ್ತಿಗಳಿಗಿಂತ ಉತ್ತಮವೆಂದು ಸ್ಪಷ್ಟಪಡಿಸುವ ಸಲುವಾಗಿ ಉದ್ದಕ್ಕೂ ಕಿಟೆಲ್ ಹಾಗೂ ಡಿ.ಎಲ್.ಎನ್. ಪರಿಷ್ಕರಣದ ಪಾಠಾಂತರಗಳನ್ನು ಗುರಿತಿಸಲಾಗಿದೆ. ಇದರಿಂದ ಕೃತಿಯು ಮೂಲಕೃತಿಗೆ ಹತ್ತಿರವಾಗಿರುವಂತೆ ಪ್ರಕಟವಾಗಿದೆ ಎಂಬುದು ಮನದಟ್ಟಾಗುತ್ತದೆ.

ಸಂಪಾದಕರು ಗ್ರಂಥಭಾಗವನ್ನು ಮೂಲದ ಕ್ರಮದಂತೆ ಸೂತ್ರ-ವೃತ್ತಿಯನ್ನು ಮಾತ್ರ ನೀಡಲಾಗಿದ್ದು, ವೃತ್ತಿಯ ಕೆಳಗೆ ತಿಳಿಗನ್ನಡದಲ್ಲಿ ಸಾಮಾನ್ಯರಿಗೆ ಅರ್ಥವಾಗುವಂತೆ ವಿವರಣೆಕೊಟ್ಟಿದ್ದಾರೆ. "ಪ್ರತಿಯೊಂದು ಸೂತ್ರದ ಪಕ್ಕದಲ್ಲೇ ಅದರ ಉದ್ದೇಶವನ್ನು ಕಣ್ಣೆತ್ತಿ ನೋಡಿದಾಕ್ಷಣಕ್ಕೆ ಗ್ರಹಿಸಲಾಗುವಂತೆ ಒಂದೆರಡು ಪದಗಳಲ್ಲೇ ಇನ್ನೂ ಸಣ್ಣಕ್ಷರದಲ್ಲಿ ಅಚ್ಚುಹಾಕಿಸಿದೆ ಮತ್ತು ಒಂದನೆಯ ಪ್ರಕರಣದ ೫೭ ಶಬ್ದಗಳನ್ನು, ಆರನೇ ಪ್ರಕರಣದ ಧಾತುಪಾಠವನ್ನು, ಎಂಟನೇ ಪ್ರಕರಣವಾದ ಮೇಲೆಬರುವ ಪ್ರಯೋಗಸಾರವನ್ನು ಕಿಟ್ಟೆಲ್ ಮುಂತಾದವರ ಪರಿಷ್ಕರಣದಲ್ಲಿರುವಂತೆ ಅಕಾರಾದಿ ಮಾಡಿ ಅಸ್ತವ್ಯಸ್ತಗೊಳಿಸದೆ ಕೇಶಿರಾಜನು ಪಟ್ಟಿಮಾಡಿದ ಆನುಪೂರ್ವಿಯಲ್ಲಿಯೇ ಅಚ್ಚುಹಾಕಿಸಿ ಅಲ್ಲಲ್ಲಿಯೇ ಅವುಗಳ ಅಕಾರಾದಿಯನ್ನು ಅಡಿಟಿಪ್ಪಣಿಯಲ್ಲಿ ಪ್ರತ್ಯೇಕವಾಗಿ ಜೋಡಿಸಲಾಗಿದೆ"[೧೮] ಹೀಗೆನ್ನುವುದರ ಮೂಲಕ ಕೃತಿಯ ರೂಪಚಿತ್ರಣವನ್ನು ದರ್ಶಿಸಿದ್ದಾರೆ. ಗ್ರಂಥಭಾಗದ ಎರಡು ಸೂತ್ರಗಳ ವಿನ್ಯಾಸದಿಂದ ಇದರ ಸ್ವರೂಪವನ್ನು ಸ್ಥೂಲವಾಗಿ ಅರ್ಥೈಸಿಕೊಳ್ಳಬಹುದು-

ಉದಾಹರಣೆ-೧

ಶ್ರೀವಾಗ್ದೇವಿಗೆ ಶಬ್ದದಿ — ವಾಗ್ದೇವಿಗೆ ನಮನ
ನಾನಾವಾವಿಂದ್ರಿಯದ ವಿಷಯಮಂ ಶ್ರೋತ್ರದೊಳು (ಳ್ಉ)
ದ್ಭಾವಿಪ ನಿರ್ಮಳಮೂರ್ತಿಗಿ (ಗೆ,ಇ) — ೧
ಳಾವಂದ್ಯೆಗೆ-ಶಾಸ್ತ್ರಮುಖದೊಳವನತನಪ್ಪೆಂ

ಉದಾಹರಣೆ-೨

ಒಳವು ಮಹಾಪ್ರಾಣಂಗಳ್ — ಕನ್ನಡದಲ್ಲಿ ಕೆಲವೆಡೆ ನೈಜವಾಗಿ ಮಹಾಪ್ರಾಣಗಳಿವೆ
ವಿಳಸತ್ ಕರ್ನಾಟ ಭಾಷೆಯೊಳ್ ಕೆಲವು ನಿಜೋ — ಅನುನಾಸಿಕ
ಜ್ಜ್ವಳಮಾಗಿ; ವರ್ಗದಂತ್ಯಂ
ಗಳನಱಿಯನುನಾಸಿಕಾಖ್ಯೆಯಂ ತಳೆದಿರ್ಕುಂ — ೨೫

---

೧೮ ಎಲ್.ಬಸವರಾಜು, ಕೇಶಿರಾಜನ ಶಬ್ದಮಣಿದರ್ಪಣಂ, ಅರಿಕೆ, ಶ್ರೀ ಚಿನ್ಮೂಲಾದ್ರಿ ಬೃಹನ್ಮಠ ಸಂಸ್ಥಾನ ಚಿತ್ರದುರ್ಗ, ಮೊದಲ ಮುದ್ರಣ, ೧೯೮೬, ಪುಟ ೫-೬

"ಒಟ್ಟಿನಲ್ಲಿ 'ಶಬ್ದಮಣಿದರ್ಪಣ'ವನ್ನು ಕ್ರಮಬದ್ಧವಾಗಿ ಅಧ್ಯಯನ ಮಾಡಲು ಬೇಕಾದ ಸಹಾಯಕ ಸಾಮಾಗ್ರಿಗಳನ್ನೆಲ್ಲಾ ಇಲ್ಲಿ ಹೊಂದಿಸಿಕೊಡಲಾಗಿದೆ. ಅಂಥವುಗಳಲ್ಲಿ- ಸೂತ್ರಗಳ ಅಕಾರಾದಿ, ಪರಿಭಾಷೆಪ್ರಕ್ರಿಯೆಗಳ ಅಕಾರಾದಿ, ಆಕರಸಹಿತ ಪ್ರಯೋದಗಳ ಅಕಾರಾದಿ, ಸಮುಚ್ಛಯ ವಾಕ್ಯ ಮುಂತಾದ ಅನುಬಂಧಗಳು ಗಮನಾರ್ಹವಾದವು'. ಇದು ಕೇವಲ ಪ್ರತಿಷ್ಠೆಯ ಮಾತಲ್ಲ. ಅತ್ಯಂತ ಶಾಸ್ತ್ರೀಯ ಆವೃತ್ತಿಯಾಗಿ 'ಶಬ್ದಮಣಿದರ್ಪಣ'ವನ್ನು (ಜನಸಾಮಾನ್ಯರಿಗೆ ಅರ್ಥವಾಗುವಂತೆ) ಕನ್ನಡಸಾಹಿತ್ಯಕ್ಕೆ ನೀಡಿದ ಕೀರ್ತಿ ಸಹಜವಾಗಿಯೇ ಸಲ್ಲುತ್ತದೆ.

ಈ ಪರಿಷ್ಕರಣದ ತರುವಾಯ ಹಲವಾರು ವಿಮರ್ಶಾ ಪ್ರಬಂಧ, ಲೇಖನ, ಸರಳಾನುವಾದ, ಸಂಗ್ರಹಗಳು ಹೊರಬಂದಿರುವುದನ್ನು ಗಮನಿಸಬಹುದು. ಈ ಎಲ್ಲಾ ಮುಂದಿ ಕಾರ್ಯನಿಯೋಜನೆಗೆ ಎಲ್.ಬಸವರಾಜು ಅವರ ಈ ಗ್ರಂಥ ಮಾರ್ಗದರ್ಶಿಯಾಗಿದ್ದು ಚಾರಿತ್ರಿಕ ದಾಖಲೆಯಾಗಿದೆ. ಇತ್ತಿಚೇಗೆ ಟಿ.ವಿ.ವೆಂಕಟಾಚಲಶಾಸ್ತ್ರೀ ಅವರ ಸಂಪಾದಕತ್ವದಲ್ಲಿ 'ಶಬ್ದಮಣಿದರ್ಪಣ'ದ ಪರಿಷ್ಕರಣ ಆವೃತ್ತಿ ಹೊರಬಂದಿದ್ದು, ಪಾಠಪರಿಷ್ಕರಣೆಯಲ್ಲಿ ಇದೂ ಸಹ ಎಲ್.ಬಸವರಾಜು ಅವರ ಗ್ರಂಥವನ್ನು ಯಥೋಚಿತವಾಗಿ ಬಳಸಿಕೊಂಡಿದೆ ಎಂಬುದನ್ನು ಸ್ಮರಿಸಬಹುದು.

## ೨. ಸರಳಾನುವಾದ

ಕನ್ನಡಸಾಹಿತ್ಯವು ಸುಮಾರು ಎರಡೂವರೆ ಸಾವಿರವರ್ಷಗಳ ಸಾಹಿತ್ಯಪರಂಪರೆಯನ್ನು ಹೊಂದಿದೆ. ಆಯಾಕಾಲದ ಕಾವ್ಯಧೋರಣೆ ನಿಜವಾಗಿಯೂ ತತ್ಪೂರ್ವದ ಸಾಹಿತ್ಯ ಪರಂಪರೆಯೊಂದಿಗೆ ಸವಾಲಾಗಿ ನಿಲ್ಲುವ ಮತ್ತು ಸ್ಪಷ್ಟವಾಗಿ ಗುರುತಿಸಬಹುದಾದ ಬದಲಾವಣೆಯನ್ನು ಅಭಿವ್ಯಕ್ತಿಯಲ್ಲಿ ಸಾಧಿಸಿದ್ದರಿಂದ ವಿಶಿಷ್ಟತೆಯನ್ನು ಪಡೆದುಕೊಂಡಿದೆ. ಇದರಿಂದ ಸಹಜವಾಗಿಯೇ ಸಾಹಿತ್ಯಾಭಿವ್ಯಕ್ತಿಯಲ್ಲಿ ಹಲವಾರು ಸಿತ್ಯಂತರಗಳು ಏರ್ಪಟ್ಟಿವೆ. ಪಂಪ ಕನ್ನಡದ ಆದಿಕವಿ. ಈತನ ಅನಂತರವೇ ಕನ್ನಡಸಾಹಿತ್ಯ ಅಧಿಕೃತ ಚಾಲನೆಪಡೆಯಿತು. ಪಂಪ ಹಳಗನ್ನಡದಲ್ಲಿ "ಆದಿಪುರಾಣ" ಮತ್ತು "ವಿಕ್ರಮಾರ್ಜುನ ವಿಜಯಂ' ಎಂಬ ಚಂಪೂಕಾವ್ಯಗಳನ್ನು ರಚಿಸಿದನು. ಇವು ಕ್ರಮವಾಗಿ ಸಂಸ್ಕೃತದ ಮಹಾಪರಾಣ ಹಾಗೂ ಮಹಾಭಾರತದ ಮೂಲದಿಂದ ಪ್ರೇರಿತವಾಗಿ ರಚನೆಗೊಂಡವು.ಪಂಪ ತನ್ನ ಕಾವ್ಯಗಳನ್ನು ಸಂಸ್ಕೃತ ಹಾಗೂ ತನ್ನ ಪೂರ್ವದ ಕೆಲಕವಿಗಳ ಪ್ರಭಾವದಿಂದ ಸಂಸ್ಕೃತಭೂಯಿಷ್ಠವಾದ ಚಂಪೂಶೈಲಿಯಲ್ಲಿ ಕಾವ್ಯರಚನೆಮಾಡಿದ್ದಾನೆ. ಅಂದಿಗೆ ಅದು ಪಂಪನಿಗೆ ಅಗತ್ಯವಾದ ಶ್ರೇಷ್ಠಮಾರ್ಗವಾದಿತ್ತು. ಆದರೆ ಭಾಷೆ ಜೀವತರಂಗಿಣಿ. ಕಾಲಕಾಲಕ್ಕೆ ಜನರ ಅಗತ್ಯತೆಗಳಿಗೆ ತಕ್ಕಂತೆ ಸರಳಗೊಳ್ಳುತ್ತಾ ಬಂದಿದೆ. ಇದಕ್ಕೆ ಕನ್ನಡ ಭಾಷೆಯು ಹೊರತಲ್ಲ. ಕನ್ನಡಭಾಷಾಸಾಹಿತ್ಯ ಹಳಗನ್ನಡ, ನಡುಗನ್ನಡ ಹಾಗೂ ಹೊಸಗನ್ನಡವೆಂಬ ಅವಸ್ಥಾಂತರಗಳನ್ನು ಪಡೆದುಕೊಂಡು ವಿಶಿಷ್ಟರೀತಿಯಲ್ಲಿ ಬೆಳೆದುನಿಂತಿದೆ. ಇದರಿಂದ ಭಾಷೆಯಲ್ಲಿನ ವೈಪರೀತ್ಯಗಳು ಕ್ಲಿಷ್ಟ ಹಾಗೂ ಸಂದಿಗ್ದವಾಗಿವೆ. ಇದರಂದಾಗಿ ಇಂದಿನ ಭಾಷಾಭ್ಯಾಸಿಗಳಿಗೆ ಹಿಂದಿನ ಭಾಷಾಧ್ಯಯನ ಸ್ವಲ್ಪ ತೊಡಕಾಗಿ ಪರಿಣಮಿಸಿದೆ. ಇಂದು ಹಳಗನ್ನಡಕಾವ್ಯಗಳು ಭಾಷಾತೊಡಕಿನಿಂದಾಗಿ ಜನಸಾಮಾನ್ಯರಿಂದ ದೂರ ಉಳದಿದ್ದು ತಿರಸ್ಕಾರಯೋಗ್ಯವಾಗಿವೆ. ಈ ಕಾರಣದಿಂದ ಪ್ರಾಚೀನ ಹಳಗನ್ನಡಕಾವ್ಯಗಳು ಕೇವಲ ಪಂಡಿತರ, ವಿದ್ವಾಂಸರ ಸ್ವತ್ತಾಗಿದೆಯೇ ಹೊರೆತು ಜನಸಾಮಾನ್ಯರಿಗೆ ಅದನ್ನು ಓದಲು ಸಾಧ್ಯವಾಗಿಲ್ಲ. ಸಮಕಾಲೀನ ಸಮಾಜದ ಇಂತಹ ಗಂಭೀರ ಸಮಸ್ಯೆಯನ್ನರಿತ ಎಲ್.ಬಸವರಾಜು ಅವರು ಅದಕ್ಕೆ ಪರಿಹಾರ ಹುಡುಕುವ ಪ್ರಯತ್ನವಾಗಿ,ಮುಂಜಾಗ್ರತಾ ಕ್ರಮವಾಗಿ ಜನಪರಕಾಳಜಿಯಿಂದ ಕೆಲವು ಹಳಗನ್ನಡಕಾವ್ಯಗಳನ್ನು ಸರಳೀಕರಿಸಿದ್ದಾರೆ."ಸರಳ ಪಂಪಭಾರತ" ಕೃತಿಯ ಮುನ್ನುಡಿಯಲ್ಲಿ ಅವರೇ ಹೇಳುವಂತೆ–"ಈ ಪಂಪಭಾರತ ಇಷ್ಟು ಉತ್ತಮೋತ್ತಮ ಕಾವ್ಯವಾದಾಗ್ಯೂ, ಪಂಡಿತರನ್ನೂ, ವಿದ್ವಾಂಸರನ್ನೂ ಅಥವಾ ಕುರಿತೋದಲೇಬೇಕಾದ ಪದವಿಯ ಅಥವಾ ಸ್ನಾತಕೋತ್ತರ ವಿದ್ಯಾರ್ಥಿಗಳನ್ನು ಬಿಟ್ಟರೆ, ಇದನ್ನು ಯಾರೂ ಓದಲಾಗುತ್ತಲೇ ಇಲ್ಲ. ಇದಕ್ಕೆ ಕಾರಣ, ಆ ಇತರರಿಗೆ ಇದನ್ನು ಓದಲು ಇಷ್ಟವಿಲ್ಲವೆಂದಲ್ಲ; ಹೇಗೆ ಹೇಗೆ ಬಿಡಿಸಿಕೊಂಡು ಎಲ್ಲೆಲ್ಲಿಗೆ ನಿಲ್ಲಿಸಿಕೊಂಡು ಓದಬೇಕು ಎಂಬುದು ಗೊತ್ತಾಗದಿರುವುದು. ಅದು ಗೊತ್ತಾಗುವಂತೆ ವಿಂಗಡಿಸಿ ವ್ಯವಸ್ಥಿಸಿ ಈ ಕಾವ್ಯವನ್ನು ಇದುವರೆವಿಗೆ ಸಂಪಾದಿಸಿಕೊಟ್ಟಿಲ್ಲದಿರುವುದೇ ಮುಖ್ಯಕಾರಣ". ಇದನ್ನು ಅರಿತು ಎಲ್. ಬಸವರಾಜು ಅವರು ಪಂಪರನ್ನರ ಕಾವ್ಯಗಳನ್ನು ಶುದ್ಧವಾಗಿ ಪರಿಶೋಧಿಸಿ, ಸರಳಗೊಳಿಸಿ, ಜನಸಾಮಾನ್ಯರೂ ಅವರ ಕಾವ್ಯಗಳನ್ನು ಓದುವಂತೆ ಅನುವು ಮಾಡಿಕೊಟ್ಟಿದ್ದಾರೆ. ಹೀಗೆ ಎಲ್. ಬಸವರಾಜು ಅವರು ಸರಳಗೊಳಸಿರುವ ಹಳಗನ್ನಡಕಾವ್ಯಗಳನ್ನು ಕುರಿತ ಅಧ್ಯಯನ ಈ ಅಧ್ಯಾಯದಲ್ಲಿ ಕೈಗೊಳ್ಳಲಾಗಿದೆ.

# ಸರಳ
# ಪಂಪ ಭಾರತ



ಸಂಪಾದಕ
## ಡಾ. ಎಲ್. ಬಸವರಾಜು

ಗೀತಾ ಬುಕ್ ಹೌಸ್ : ಪ್ರಕಾಶಕರು : ಮೈಸೂರು

## ೧. ಸರಳ ಪಂಪಭಾರತ (೧೯೬೬)

ಪಂಪನ ವಿಕ್ರಮಾರ್ಜುನವಿಜಯಂ' ಕೃತಿ ಸಂಸ್ಕೃತದ ವ್ಯಾಸಮಹಾಭಾರತದ ಕಥೆಯನ್ನು ಮೈಗೆಡಲೀಯದೆ ಕನ್ನಡಿಸಿ ಸಂಗ್ರಹಿಸಿದ ಕಾವ್ಯರೂಪ.ಪಂಪನೇ ಹೇಳುವಂತೆ ಕನ್ನಡದಲ್ಲಿ ೧೫೦೦ ವರ್ಷಗಳ ಹಿಂದೆ ಸಮಗ್ರ ಈ ಭಾರತವನ್ನು ಸಂಗರಹಿಸುವುದಕ್ಕೆ ಅಥವಾ ಪ್ರತಿಬಿಂಬಿಸುವುದಕ್ಕೆ ಯಾರೂ ಸಮರ್ಥವಾಗಿರಲಿಲ್ಲ. ಈ ಕೊರತೆಯನ್ನು ನೀಗಿದವನು ಪಂಪ. ಇದರಿಂದ ಈ ಕೃತಿ "ಸಮಸ್ತಭಾರತ'ವಾಗಿ ಕನ್ನಡಿಗರಿಗೆ ಕೃತಿರೂಪತಾಳಿದ್ದು ಹೆಮ್ಮೆಯ ಹಾಗೂ ಸಂತೋಷದ ಸಂಗತಿ.

ಎಲ್.ಬಸವರಾಜು ಅವರು ಸರಳಪಂಪಭಾರತದ ಅರಿಕೆಯಲ್ಲಿ ಹೇಳವಂತೆ_ಪಂಪಭಾರತ "ವಾಸಭಾರತದಂತೆ ಪಂಚಮವೇದ ಪ್ರಶಸ್ತಿಯನ್ನು ಉಳಿಸಿಕೊಳ್ಳಲು ಬಹ್ವಂಶದಲ್ಲಿ ಯೋಗ್ಯವಾದುದಾಗಿಯೇ ಇದ್ದಿತಾದರೂ ಅರಿಕೇಸರಿಯ ಸ್ಪರ್ಶವಿದ್ದಿತಾಗಿ ಪಮಪನ ಈ ಭಾರತವನ್ನು ವೈದಿಕರು ಓದಲಿಲ್ಲ; ಜೈನಸಂಪ್ರದಾಯನುಸಾರಿಯಲ್ಲವೆಂದು ಜೈನರೂ ಓದಲಿಲ್ಲ. ಹೀಗಾಗಿ ಕನ್ನಡ ಸಾಹಿತ್ಯದಲ್ಲೇ ಅತ್ಯಂತ ಪ್ರಶಸ್ತವಾದ ಪಂಪಭಾರತ ಸುಮಾರು ಸಾವಿರವರ್ಷಗಳ ಕಾಲ ಅಟ್ಟದ ಮೇಲೂ ಅಲ್ಲ ಹಿತ್ತಲಿಗೆ ಎಸೆಯಲ್ಪಟ್ಟಿತ್ತು". ಪಂಪನು ಆದಿಪುರಾಣವನ್ನು ಬರೆದ ಮಾತ್ರಕ್ಕೆ ಜೈನರಿಂದ ಪುರಸ್ಕೃತನಾದನೋ ಹೊರೆತು ಪಂಪಭಾರತ ಬರೆದ ಕಾರಣದಿಂದಲ್ಲ. ಧರ್ಮದ ಮಿಥ್ಯದೃಷ್ಟಿ ಈ ಕೃತಿಯನ್ನು ಆವರಿಸಿದೆ, ಎನ್ನುವ ಎಲ್.ಬಸವರಾಜು ಅವರ ಮಾತು ಒಪ್ಪದಕ್ಕದ್ದಾಗಿದೆ.ಜೊತೆಗೆ ಪಂಪ ತನ್ನ ಅಶ್ರಯದಾತ ಚಾಲುಕ್ಯ ಅರಿಕೇಸರಿಯನ್ನು ಕಥಾನಾಯಕ ಅರ್ಜುನನೊಂದಿಗೆ ಸಮೀಕರಿಸಿರುವುದರಿಂದ ಮೂಲಭಾರತದಿಂದ ಭಿನ್ನದೃಷ್ಟಿಧೋರಣೆ ಹೊಂದಿದೆ, ಎಂಬ ಕಾರಣದಿಂದ ಇತರ ಭಾಷಾವಿದ್ವಾಂಸರಿಂದಲೂ ಪಂಪನ ಈ ಕೃತಿಗೆ ಒದಗಿದ ನಿಷ್ಕೃಷ್ಟತೆಯನ್ನು ತಿಳಿಸಿದ್ದಾರೆ.

ಪಂಪನ ಈ ಸಮಸ್ತಭಾರತದ ಪ್ರತಿಗಳು ಹೇರಳವಾಗಿ ದೊರಕದ ಕಾರಣ ಈ ಕೃತಿ ಬಹಳಕಾಲ ಅಜ್ಞಾತದಲ್ಲಿ ಉಳಿಯಲು ಕಾರಣವಾಯಿತೆನ್ನಬಹುದು.ಹೀಗೆ ಅಸ್ತಂಗತವಾಗಿದ್ದ ಈ ಕೃತಿಯನ್ನು ಎರಡು ಹಸ್ತಪ್ರತಿಗಳ ಸಹಾಯದಿಂದ ೧೮೯೮ ರಲ್ಲಿ ಬಿ.ಎಲ್.ರೈಸ್ ಸಂಗತಗೊಳಿಸಿದರು. ಇದಕ್ಕೂ ಮುನ್ನ ದೇಶೀಯ ವಿದ್ವಾಂಸರ ಸಹಾಯದಿಂದ ಪಂಪನ ಕೆಲವು ಮಾಹಿತಿ ಸಂಗ್ರಹಿಸಿದ ಬಿ.ಎಲ್.ರೈಸ್ ರಾಯಲ್ ಏಷಿಯಾಟಿಕ್ ಸೊಸೈಟಿಯ ಜರ್ನಲ್ನಲ್ಲಿ ೧೮೮೨ ರ ಜನವರಿ ಸಂಚಿಕೆಯಲ್ಲಿ "The poet PAMPA" ಎಂಬ ಆಂಗ್ಲ ಬಿಡಿಲೇಖನವೇ ಪಂಪನ ಬಗೆಗಿನ ಮೊದಲ ಅಧಿಕೃತ ಪ್ರಕಟಣೆಯಾಗಿದೆ.

ಈ ಸಂಶೋಧನಾ ಲೇಖನದ ತರುವಾಯ ಬಿ.ಎಲ್.ರೈಸ್ ಪೂನಾ ಡೆಕ್ಕನ್ ಕಾಲೇಜಿನಲ್ಲಿದ್ದೊಂದು ಪ್ರತಿ ಹಾಗೂ ಮೈಸೂರಿನ ಸರಸ್ವತಿ ಭಂಡಾರದಲ್ಲಿದ್ದ ಮತ್ತೊಂದು ಸಮಗ್ರಪ್ರತಿಯ ಸಹಾಯದಿಂದ ಪಂಪಭಾರತದ ಪರಿಷ್ಕರಣೆಗೆ ತೊಡಗಿದರು.ಅವರ ಈ ಕಾರ್ಯಕ್ಕೆ ದೇಶೀಯ ವಿದ್ವಾಂಸರು ನೆರವು ನೀಡಿದ್ದರಿಂದ ೧೮೯೮ ರಲ್ಲಿ ಮೊದಲಬಾರಿಗೆ ಪಂಪನ ಈವಿಕ್ರಮಾರ್ಜುನವಿಜಯಂ'ಕೃತಿ ಪ್ರಕಟಗೊಂಡಿತು.ಇದಕ್ಕಾಗಿ ರೈಸ್ ತಮ್ಮ ಹಿಂದಿನ ವಿದೇಶಿ ವಿದ್ವಾಂಸರು ಈಗಾಗಲೇ ಮಾಡಿದ್ದ ಸಂಪಾದಿತಕಾರ್ಯವನ್ನು ಬಳಸಿಕೊಂಡರು.ಬಿ.ಎಲ್.ರೈಸ್ ಪರಿಷ್ಕರಿಸಿದ ಈ ಗ್ರಂಥವನ್ನು ಕುರಿತು ಎಲ್.ಬಸವರಾಜು ಅವರು ತಮ್ಮ ಸರಳ ಪಂಪಭಾರತ ಪೀಠಿಕೆಯಲ್ಲಿ– "ರೈಸರ ಈ ಪರಿಷ್ಕರಣದಲ್ಲಿ ಹಲವೆಡೆ(ಮೂಲಪಾಠವಿರಲಿ)ಶುದ್ಧಪಾಠವೂ ಇಲ್ಲದಿರಬಹುದು.ಗ್ರಂಥಪಾಠವಾದೆಡೆಗಳಲ್ಲಿ ಊಹಾತ್ಮಕವಾಗಿ ಕಟ್ಟಿದ ಪಾಠಗಳನ್ನು ಪ್ರತಿನಿಧಾನ ಮಾಡದಿರಲೂಬಹುದು, ಮತ್ತು ಯಾವ ವಿಧವಾದ ವಿರಾಮಚಿಹ್ನೆಯಾಗಲಿ ಸ್ಥಳವಿಂಗಡಣೆ

ಯಾಗಲಿ ಇಲ್ಲದೆ ಪದ್ಯಗಳನ್ನೆಲ್ಲಾ-ಒಂದೊಂದೂ ಅಖಂಡ ಸಮಸ್ತಪದವೆಂಬಂತೆ-ಒತ್ತೊತ್ತಾಗಿ ಅಚ್ಚುಹಾಕಿಸಿ-ಬಹಳ ಕಷ್ಟಪಡದೆ-ಬಿಡಿಸಿ ಓದಲಾಗದಂತೆಯೂ ಮಾಡಿರಬಹುದು. ಆದರೂ ರೈಸರು ಮಾಡಿದ ಪರಿಷ್ಕರಣ ಒಂದು ಕಾರ್ಯವೆನ್ನದೆ ಬೇರೆನೂ ಹೇಳಲಾಗದು"[೧] ಎಂದಿರುವುದು ವಾಸ್ತವದ ಸಂಗತಿಯಾಗಿದೆ.

ಆದರೂ ರೈಸರ ಈ ಕಾರ್ಯದಿಂದ ಅಜ್ಞಾತವಾಗಿದ್ದ ಪಂಪನ ಕೃತಿಗಳು ಜ್ಞಾತಗೊಂಡು ಕನ್ನಡಸಾಹಿತ್ಯದಲ್ಲಿ ಪಂಪನ ಸ್ಥಾನ ಸ್ಥಿರವಾಗಿ ನೆಲೆಗೊಳ್ಳಲು ಸಹಕಾರಿಯಾಗಿದೆ.ರೈಸರ ಈ ಪರಿಷ್ಕರಣೆಯ ೩೦ ವರ್ಷಗಳ ಬಳಿಕ,ಅಂದರೆ ೧೯೨೭-೨೮ ರಲ್ಲಿ ಕನ್ನಡಸಾಹಿತ್ಯಪರಿಷತ್ತು ಪಂಪಭಾರತದ ಒಂದು ಪರಿಷ್ಕರಣವನ್ನು ಪ್ರಕಟಮಾಡಿತು. ರೈಸರ ಹಿಂದಿನ ಆವೃತ್ತಿ ಕೃತಿಯೊಂದಿಗೆ ತಾಳೆನೋಡುವುದರೊಂದಿಗೆ ಮತ್ತೊಂದು ಶುದ್ಧಪ್ರತಿ ದೊರೆತ ಕಾರಣ(ಬಿಹಾರ ಪಾಂತ್ಯದ ಆರಾ ಪ್ರತಿ) ದೇಶೀಯವಿದ್ವಾಂಸರಾದ ಶ್ರೀ ಬೆಳ್ಳಾವೆ ವೆಂಕನಾರಣಪ್ಪ,ಕಡಬದ ನಂಜುಂಡಶಾಸ್ತ್ರೀ ಹಾಗೂ ಟಿ.ಎಸ್.ವಂಕಣ್ಣಯ್ಯನವರ ನೇತೃತ್ವದಲ್ಲಿ ೧೯೨೭ ರಲ್ಲಿ ಸಾಕಷ್ಟು ಸುಧಾರಿತ ಪ್ರಮಾಣಿಕ ಪರಿಷ್ಕರಣ ಹೊರಬಂದಿತು. ಇದು ಎಲ್.ಬಸವರಾಜು ಅವರು ಸಂಪಾದಿಸಿರುವ ಅಂದರೆ "ಸರಳ ಪಂಪಭಾರತ" ಪರಿಷ್ಕೃತ ಪ್ರಕಟಣೆ ಬರುವವರೆಗೂ ಪ್ರಮಾಣೀಕೃತ ಸಂಪಾದನೆಯಾನೆಯಾಗಿತ್ತು.

ಎಲ್.ಬಸವರಾಜು ಅವರು ತಮ್ಮ ಗ್ರಂಥದ ಪೀಠಿಕೆಯಲ್ಲಿ ಕನ್ನಡ ಸಾಹಿತ್ಯಪರಿಷತ್ತಿನವರು ಸಂಪಾದಿಸಿದ ಪರಿಷ್ಕರಣದಲ್ಲಿನ ದೋಷಗಳನ್ನು ದರ್ಶಿಸುತ್ತಾರೆ. ಇದು ಅಪವಾದಹೊರಿಸಬೇಕೆಂಬ ವಿತಂಡವಾದವಲ್ಲ.ಶುದ್ಧಸಂಪಾದಕನು ಮಾಡುವ ಕರ್ತವ್ಯ ಎಂಬುದನ್ನು ಮರೆಯಬಾರದು.ಅವರು ಹೇಳುವಂತೆ ಪರಿಷತ್ತಿನ ಪ್ರಕಟಣದಲ್ಲಿ-ಬಿಹಾರದ ಆರಾ ಪ್ರತಿಯ ಪಂಕ್ತಿಮಧ್ಯದಲ್ಲಿ ಮತ್ತು ಅಂಚಿನಲ್ಲಿ ದೊರೆಯುವ ಪಾಠಾಂತರಗಳನ್ನು ಕ್ಷುಣ್ಣವಾಗಿ ಅ ಪರಿಷತ್ತಿನ ವಿದ್ವಾಂಸರು ಬಳಸಿಕೊಳ್ಳಲಿಲ್ಲ, ಹಾಗೂ ಆರಾಪ್ರತಿಯ ಪ್ರತಿಕಾರನು ಪಂಕ್ತಿಮಧ್ಯದಲ್ಲಿ ಪಾಠಾಂತರ ಗುರುತಿಸುವುದಕ್ಕಾಗಿ ಬಳಸಿಕೊಂಡಿರುವ ಪ್ರತಿ ಒಂದೇ ಒಂದು ಎಂದು ಭಾವಿಸಿದುದು. ಆದರೆ ಎಲ್.ಬಸವರಜು ಅವರು ಹೇಳುವಂತೆ "ಆರಾಪ್ರತಿಯು ವಾಸ್ತವವಾಗಿ ಒಂದು ಪ್ರತಿಯಲ್ಲ, ಎರಡು ಪ್ರತಿಯೂ ಅಲ್ಲ; ಅದು ಹಲವು ಪ್ರತಿಗಳ ಸಮಾಹಾರ. ಈ ವಿಸ್ತಾರದಲ್ಲಿ ಆರಾಪ್ರತಿಯನ್ನು ಪರಿಷತ್ತಿನ ವಿದ್ವಾಂಸರು ಬಳಸಿಕೊಳ್ಳಲಿಲ್ಲವಾಗಿ ಅವರಿಂದ ನಡೆದ ಪರಿಷ್ಕರಣದಲ್ಲಿ ಕುಂದುಕೊರೆತೆಗಳು ಗೂಢವಾಗಿಯೇ ಉಳಿದುಬಿಟ್ಟವು".[೨]

ಈ ಮೇಲಿನ ಎರಡೂ ಪರಿಷ್ಕರಣ ಪ್ರಕಟಣದಲ್ಲಿಯೂ ಇದ್ದಂತಹ ದೋಷಗಳನ್ನು ಪರಿಹರಿಸುವ ಸಲುವಾಗಿ ಎಲ್. ಬಸವರಾಜು ಅವರು "ಸರಳ ಪಂಪಭಾರತ"ಎಂಬ ಶೀರ್ಷಿಕೆಯಡಿ ಪಂಪಭಾರತವನ್ನು ಶುದ್ಧಪರಿಷ್ಕರಣದೊಂದಿಗೆ, ಅದನ್ನು ಜನಸಾಮಾನ್ಯರು ಓದಲು ಸುಲಭವಾಗುವಂತೆ ಸರಳಾನುವಾದ ಮಾಡಿದ್ದಾರೆ. ಹೀಗೆ ಒಂದೇ ಕೃತಿಯಲ್ಲಿ ಶುದ್ಧಪರಿಷ್ಕರಣ ಹಾಗೂ ಸರಳೀಕರಣದಿಂದ ಕನ್ನಡಸಾಹಿತ್ಯಕ್ಕೆ ಪಂಪನ ಕೃತಿಯಲ್ಲಿನ

---

೧. ಎಲ್.ಬಸವರಾಜು, **ಸರಳಪಂಪಭಾರತ** ಪೀಠಿಕೆ, ಗೀತಾಬುಕ್‌ಹೌಸ್, ಮೈಸೂರು ಪ್ರಥಮ ಮುದ್ರಣ ೧೯೯೯, ಪುಟ-೧೩

೨. ಎಲ್.ಬಸವರಾಜು, **ಸರಳಪಂಪಭಾರತ** ಪೀಠಿಕೆ, ಗೀತಾಬುಕ್‌ಹೌಸ್, ಮೈಸೂರು ಪ್ರಥಮ ಮುದ್ರಣ ೧೯೯೯, ಪುಟ-೧೪

ಕೊರತೆಯನ್ನು ನೀಗಿಸಿದ್ದಾರೆ ಎಂದರೆ ತಪ್ಪಾಗಲಾರದು. ಎಲ್. ಬಸವರಾಜು ಅವರು ಈ ಪರಿಷ್ಕರಣಕಾರ್ಯಕ್ಕೆ ಸುಕ್ತ್ಂಕರರ ಸಂಸ್ಕೃತಭಾರತ ಹಾಗೂ ಅಳಸಿಂಗರಾರ್ಯನ ಕನ್ನಡಗದ್ಯಾನುವಾದ ಭಾರತವನ್ನು (ಪಾಠಶೋಧನೆಗಾಗಿ) ಯಥೋಚಿತವಾಗಿ ಬಳಸಿಕೊಂಡಿದ್ದಾರೆ. ಅವುಗಳೊಂದಿಗೆ ತಾಳೆನೋಡಿ ಶುದ್ಧಪರಿಷ್ಕರಣವನ್ನು ಹೊರತರುವಲ್ಲಿ ನಡೆಸಿದ ಪ್ರಾಮಾಣಿಕ ಪ್ರಯತ್ನ ಮೆಚ್ಚತಕ್ಕಂತಹದ್ದು.

ತಾವು ಈ ಹಿಂದೆ ೧೯೭೭ರಲ್ಲಿ ಪಂಪನ 'ಆದಿಪುರಾಣ'ವನ್ನು ಪರಿಷ್ಕರಿಸಿದಂತೆ ಪಂಪಭಾರತ ಪರಿಷ್ಕರಣದಲ್ಲಿಯೂ ಪಾಠಾಂತರ ವೈವಿಧ್ಯವನ್ನು ಮತ್ತು ಮೂಲಭಾರತದೊಡನೆ 'ಪಂಪಭಾರತ'ಕ್ಕಿರುವ ಸಾದೃಶ್ಯ ವೈದೃಶ್ಯಗಳನ್ನು ಅಡಿಟಿಪ್ಪಣಿಯಲ್ಲಿ ನೀಡಿದ್ದಾರೆ. ಅಗತ್ಯವಿದ್ದೆಡೆ ವ್ಯಾಕರಣಾಂಶಗಳನ್ನು ಅದರ ಅರ್ಥನಿರ್ಣಯಗಳನ್ನು ಚರ್ಚಿಸಿದ್ದಾರೆ. ಈ ಪರಿಷ್ಕರಣ ಪ್ರಕಟಣೆಗೆ ವಿಶ್ವವಿದ್ಯಾನಿಲಯವಾಗಲಿ, ಸಾರ್ವಜನಿಕ ಹಾಗೂ ಸರ್ಕಾರದ ಸಂಸ್ಥೆಯಾಗಲಿ ಮುಂದೆ ಬರಲಿಲ್ಲ ಎಂಬುದಾಗಿ ತಮ್ಮ ನೋವನ್ನು ತೋಡಿಕೊಳ್ಳುತ್ತಾರೆ. ಇದು ಪ್ರಸ್ತುತ ಸಂದರ್ಭದ ವಿಪರ್ಯಾಸವೆ ಸರಿ.

ಈ ಕೃತಿಯಲ್ಲಿ ಎಲ್.ಬಸವರಾಜು ಅವರು ಸಾಂಪ್ರಾದಾಯಿಕವಾದ ಛಂದೋವಿನ್ಯಾಸವನ್ನು ಕೈಬಿಟ್ಟು ಪಂಪಭಾರತವನ್ನು ಸಾಮಾನ್ಯ ಓದುಗನನ್ನು ದೃಷ್ಟಿಯಲ್ಲಿಸಿಕೊಂಡು ಅರ್ಥಪಂಕ್ತಿಬದ್ಧವಾಗಿ ವಿನ್ಯಾಸಗೊಳಿಸಿದ್ದಾರೆ. ಇದು ಸಂಶೋಧನಾ ಕ್ಷೇತ್ರದಲ್ಲಿ ಒಂದು ದಿಟ್ಟಹೆಜ್ಜೆಯಾದರೂ ಇದನ್ನು ಅರಿಯುವಲ್ಲಿ ವಿದ್ವಾಂಸರು ವಿಫಲವಾಗಿರುವುದು ಶೋಚನೀಯ ಸಂಗತಿ. ಇಲ್ಲಿ ಅವರೇ ಹೇಳುವಂತೆ-"ಆ ಬಿಡಿಸಿದ ಸಂಧಿಯನ್ನು ಸೇರಿಸಿಕೊಂಡು, ಕೊಟ್ಟಿರುವ ಉಪರಿಗೀಟುಗೀಟಿಗೆ ನಿಲ್ಲಿಸಿಕೊಂಡು ಓದಿದರೆ,ಯಥಾಪ್ರಕಾರ ಅದರ ಛಂದೋಬದ್ಧರೂಪ ಕಾಣಬರುವುದು".[೩] ಇದು ಸಾಂಪ್ರಾದಾಯಿಕ ವಿದ್ವಾಂಸರಿಗೆ ಮಡಿವಂತಿಕೆಯ ಪ್ರಶ್ನೆಯಾದರೆ, ಹಳಗನ್ನಡ ಓದಲು ಕಬ್ಬಿಣದಕಡಲೆ ಎಂಬ ಸಾಮಾನ್ಯ ಓದುಗನಿಗೆ ದಿವ್ಯೌಷಧ ಎಂದರೆ ಅತಿಶಯೋಕ್ತಿಯಾಗಲಾರದು. ಎಲ್.ಬಸವರಾಜು ಅವರ ಈ "ಸರಳ ಪಂಪಭಾರತ" ಸಾಮಾನ್ಯ ಓದುಗರಿಗೆ ಮಾರ್ಗದರ್ಶಿಯಾದರೆ, ಹಳಗನ್ನಡವೆಂದರೆ ಬೆಚ್ಚಿಬೀಳುವ ಪ್ರಸ್ತುತಕಾಲದಲ್ಲಿ ಎಲ್.ಬಸವರಾಜು ಅವರ ಈ ಕೃತಿ ಜನಪರ ಕಾಳಜಿಯ ಹಾಗೂ ದೂರದೃಷ್ಟಿಯ ಸಂಕೇತವಾಗಿದೆ. ಮುಂದೆ ಈ ಸರಳಾನುವಾದ ಪಂಪನ ಮೂಲಪಠ್ಯವಾದರೂ ಆಶ್ಚರ್ಯವಿಲ್ಲ.

ಎಲ್.ಬಸವರಾಜು ಅವರು ಈ 'ಸರಳ ಪಂಪಭಾರತ' ಕೃತಿರಚನೆಯಲ್ಲಿ ಕಥಾಸಾರ, ಟೀಕು ಅಥವಾ ಕೃತವಿಮರ್ಶೆಗೆ ಗಮನಕೊಡದೆ, ಪಂಪಭಾರತವನ್ನು ಜನಸಾಮಾನ್ಯರೂ ಓದಬೇಕೆಂಬ ಹಂಬಲದಿಂದ ರಚಿಸಿದ್ದಾರೆ. ಪ್ರಸ್ತುತ ಕೃತಿಯ ಬಗ್ಗೆ ಅರಿಕೆಯಲ್ಲಿ- "ಈ ಪಂಪಭಾರತ ಇಷ್ಟು ಉತ್ತಮೋತ್ತಮ ಕಾವ್ಯವಾದಗ್ಯು, ಪಂಡಿತರನ್ನೂ, ವಿದ್ವಾಂಸರನ್ನೂ, ಅಥವಾ ಕುರಿತೋದಲೇಬೇಕಾದ ಪದವಿಯ ಅಥವಾ ಸ್ನಾತಕೋತ್ತರ ವಿದ್ಯಾರ್ಥಿಗಳನ್ನು ಬಿಟ್ಟರೆ, ಇದನ್ನು ಇತರರು ಯಾರೂ ಓದಲಾಗುತ್ತತಲೇ ಇಲ್ಲ. ಇದಕ್ಕೆ ಕಾರಣ ಆ ಇತರಿಗೆ ಇಷ್ಟವಿಲ್ಲವೆಂದಲ್ಲ; ಹೇಗೆ ಹೇಗೆ ಬಿಡಿಸಿಕೊಂಡು ಎಲ್ಲೆಲಿಗೆ ನಿಲ್ಲಿಸಿಕೊಂಡು ಅರ್ಥಪೂರ್ಣವಾಗಿ ಓದಬೇಕು ಎಂದು ಗೊತ್ತಾಗದಿರುವುದು. ಅದು ಗೊತ್ತಾಗುವಂತೆ ವಿಂಗಡಿಸಿ ವ್ಯವಸ್ಥಿಸಿ ಈ ಕಾವ್ಯವನ್ನು

---

೩. ಎಲ್.ಬಸವರಾಜು, **ಸರಳಪಂಪಭಾರತ** ಪೀಠಿಕೆ, ಗೀತಾಬುಕ್‌ಹೌಸ್, ಮೈಸೂರು ಪ್ರಥಮ ಮುದ್ರಣ ೧೯೯೯, ಪುಟ-೧೪

ಇದುವರೆವಿಗೆ ಸಂಪಾದಿಸಿಕೊಟ್ಟಿಲ್ಲದಿರುವುದೇ ಮುಖ್ಯಕಾರಣ". ಅಲ್ಲದೆ "ಚಂಪೂ (ಗದ್ಯ-ಪದ್ಯ-ಮಿಶ್ರ) ಶೈಲಿಯಲ್ಲಿ ಎಡಬಿಡದೆ ಸಂಧಿ-ಸಮಾಸಗಳ ಉದ್ದುದ್ದವಾದ ವಾಕ್ಯಗಳಿರುವುದು-ಪ್ರತಿಷ್ಠೆಯ ಮಾತಾಗಿತ್ತು. ಕವಿಗಳ ಪ್ರತಿಷ್ಠೆಯ ಈ ಗಹನದಲ್ಲಿ, ಎಲ್ಲಿಯೂ ಯಾವ ವಿರಾಮಚಿಹ್ನೆಯೂ ಇಲ್ಲದೆ, ಅವರ ಕಾವ್ಯವನ್ನು ಎಲ್ಲಿ ನಿಲ್ಲಿಸಬೇಕು, ಯಾವುದನ್ನು ಎಲ್ಲಿಲ್ಲಿಗೆ ಬಿಡಿಸಿ ಕೂಡಿಸಿ ಹೇಗೆ ಓದಬೇಕೆಂಬುದೊಂದೂ ತಿಳಿಯದೆ ತಬ್ಬಿಬ್ಬಾಗುವುದುಂಟು" ಎಂದು ಸಾಮಾನ್ಯ ಓದುಗರ ಗೊಂದಲವನ್ನು ಪಟ್ಟಿಹಾಕಿ, ಅದರ ನಿವಾರಣೆಗಾಗಿ ಕೃತಿರಚಿಸಿರುವುದಾಗಿ ತಿಳಿಸಿದ್ದಾರೆ.

ಪ್ರಸ್ತುತ ಕೃತಿಯಾಂತರ್ಯದಲ್ಲಿ ಬಳಕೆಯಾಗಿರುವ ಕೆಲವು ಸಾಂಕೇತಿಕ ಚಿಹ್ನೆಗಳ ವಿವರವನ್ನು ಅವರೇ ತಿಳಿಸುತ್ತಾರೆ. ಅಂದರೆ ಕೃತಿಯಾಂತರ್ಗತದಲ್ಲಿ "(=)" ಚಿಹ್ನೆಗಳಿದ್ದರೆ, ಅದು ಹಿಂದಿನ ಪದಪ್ರತ್ಯಂತರದ ಪಾಠಾಂತರವೆಂದು, "[ ]" ಚೌಕಕಂಸಾಂತರ್ಗತವಾಗಿರುವ ಪಾಠಭಾಗವನ್ನು ಪ್ರತಿಕಾರನೂ ಸ್ವಂತವಾಗಿ ಸೇರಿಸಿರುವ ಅಥವಾ ಊಹಾತ್ಮಕ ಪಾಠವೆಂದೂ,ಒಂದು ಪದದ ಮುಂದೆ ದುಂಡುಕಂಸಾಂತರ್ಗತವಾಗಿರುವ ಪದ ಹಿಂದಿನ ಪದಕ್ಕೆ ಅರ್ಥವಾಗಿದ್ದು, ಅದು ಮೂಲಪಾಠದಿಂದ ಹೊರತಾದುದು ಎಂಬುದಾಗಿ ತಿಳಿಸಿದ್ದಾರೆ. ಮುಂದುವರೆದು ಪ್ರಸ್ತುತ ಕೃತಿಯರಚನಾವಿನ್ಯಾಸವನ್ನು ಕುರಿತು "ಸರಳ ಪಂಪಭಾರತವೆಂಬ ಈ ಚಂಪೂಗ್ರಂಥದ್ದಲ್ಲಿ ಗದ್ಯಭಾಗವನ್ನೆಲ್ಲಾ ವಿಸ್ತೃತವಾದ ಆಯಾಮದಲ್ಲಿ ಅಚ್ಚುಮಾಡಲಾಗಿದೆ. ಪದ್ಯಭಾಗವನ್ನಾದರೋ ಸ್ವಲ್ಪ ಒಳಪಿಡಿಯಲ್ಲಿ ಕೊಟ್ಟು, ಅರ್ಥೈಸಲು ಅನುಕೂಲವಾಗುವಂತೆ ಅದರನುಸಾರ(ಪಾದಪಾದವೆಂಬಂತೆ)-ವಿಂಗಡಿಸಿಕೊಟ್ಟಿದೆ. ಛಂದಸ್ಸಿನ ದೃಷ್ಠಿಯಿಂದ ಒಂದೊಂದು ಪದ್ಯದ ಪಾದ ಎಲ್ಲೆಲ್ಲಿ ನಿಲ್ಲುತ್ತದೆ ಎಂಬುದನ್ನು, ಅಲ್ಲಲ್ಲಿ ಉಪರಿಯಾಗಿ ಕೊಟ್ಟಿರುವ ಒಂದು ಯಾಸೆಯ ಗೀಟಿನಿಂದ ಸೂಚಿಸಲಾಗಿದೆ.ಎಲ್ಲಕ್ಕಿಂತ ದಪ್ಪವಾದ ಅಕ್ಷರದಲ್ಲಿ ಅಚ್ಚಾಗಿರುವ ಗದ್ಯಭಾಗವು ಅಲ್ಲಲ್ಲಿಗೆ ಮುಂದುವರೆಯಲಿರುವ ಕಥಾಸಂದರ್ಭವನ್ನು ಪೂರ್ವಭಾವಿಯಾಗಿ ತಿಳಿಸುವ ಸಲುವಾಗಿ ಸಂಪಾದಕನು ಅಧಿಕವಾಗಿ ಸೇರಿಸುವಂಥದು.ಅದು ಸರಳ ಪಂಪಭಾರತದ ಪಾಠಭಾಗಕ್ಕೆ ಅಂತರ್ಗತವಾಗುವುದಿಲ್ಲ. ಗ್ರಂಥದ ಉಪಾಂತ್ಯದಲ್ಲಿ ಕೊಟ್ಟರಿವ ಸಾಂದರ್ಭಿಕ ಅರ್ಥಕೋಶವು ಆದ್ಯಂತ ಕ್ರಮವಾಗಿ ಹದಿನಾಲ್ಕು ಆಶ್ವಾಸಗಳನುಸಾರ ವಿಂಗಡಣೆಗೊಂಡು, ಅಲ್ಲಲ್ಲಿನ ಪದ್ಯಗಳ ಸಂಖ್ಯಾನುಕ್ರಮದಲ್ಲಿಯೇ-ಅರ್ಥಕ್ಲಿಷ್ಟತೆಯಿದ್ದರೆ ಮತ್ತು ಅದನ್ನು ಸ್ಪಷ್ಟಪಡಿಸಿಕೊಂಡ ಹೊರತು ಕಾವ್ಯಾಸ್ವಾದನೆ ಸಾಧ್ಯವಿಲ್ಲವೆಂದಾದರೆ; ಅಂಥ ಕಡೆಗಳಲ್ಲಿ ಮಾತ್ರ, ಕೆಲಕೆಲವು ಪದಗಳಿಗೆ ತಾತ್ಪರ್ಯತಃ ಅರ್ಥವನ್ನು ಕೊಡಲಾಗಿದೆ.ಒಡನೆಯೇ ದುಂಡುಕಂಸದಲ್ಲಿ ಆ ಪದ ಅಥವಾ ಪದಸಮೂಹವಿರುವ ಪದ್ಯದ ಕ್ರಮಸಂಖ್ಯೆಯನ್ನೂ ಕೊಟ್ಟಿದೆ. ಗದ್ಯ(ವಚನ)ದಲ್ಲಿ ಬರುವ ಅಂಥ ಕ್ಲಿಷ್ಟಪದಗಳಿಗೆ ಅರ್ಥಕೊಟ್ಟಾಗ- ಯಾವ ಕ್ರಮಸಂಖ್ಯೆಯ ಪದ್ಯವಾದ ಮೇಲಣ ಗದ್ಯ(ವಚನ)ದಲ್ಲಿ ಆ ಅದನ್ನು (೧ ವ) ಇತ್ಯಾದಿಯಾಗಿ ಕೊಡಲಾಗಿದೆ-ಅಂದರೆ,ಕರಿತ ಆಶ್ವಾಸದ ಒಂದನೇ ಪಠ್ಯವಾದ ಮೇಲೆ ಬರುವ ಗದ್ಯ(ವಚನ) ಭಾಗದಲ್ಲಿ ಆ ಕ್ಲಿಷ್ಟಪದವಿರುವುದೆಂದರ್ಥ. ಯಾವುದಾದರೂ ಪದ್ಯದ ಮುಗಿವಿನ ಸಮಕ್ಕೆ ಬಲಭಾಗದ ದುಂಡುಕಂಸಾಂತರ್ಗತ ಕ್ರಮಾಂಕದ ಮೊದಲಿಗೆ ಆ ಪದ್ಯಜಾತಿಯ ಹೆಸರನ್ನು ಸೂಚಿಸಿರದಿದ್ದರೆ, ಅದು ಅದರ ಹಿಂದಿನ ಪದ್ಯಜಾತಿಗೆ ಸೇರಿದ ಬಗೆಯದೇ ಆಗಿರುವುದೆಂದು ತಿಳಿಯಬೇಕು"[೪] ಎಂದು ಕೃತಿಯವಿನ್ಯಾಸವನ್ನು ಸವಿವರವಾಗಿ ನೀಡಿದ್ದಾರೆ. ಇದನ್ನು ಕೆಲವು ಉದಾಹೃತಪದ್ಯಗಳ ಮೂಲಕ ಮತ್ತಷ್ಟು ಸ್ಪಷ್ಟಪಡಿಸಿಕೊಳ್ಳಬಹುದು.

-------------------

೪. ಎಲ್.ಬಸವರಾಜು, **ಸರಳಪಂಪಭಾರತ** ಅರಿಕೆ, ಗೀತಾಬುಕ್‌ಹೌಸ್, ಮೈಸೂರು ಪ್ರಥಮ ಮುದ್ರಣ ೧೯೯೯, ಪುಟ-೮-೯

ಕೆ.ವಿ. ಪುಟ್ಟಪ್ಪ ಅವರು ಸಂಪಾದಿಸಿದ 'ಪಂಪಭಾರತಂ' ಕೃತಿಯ ಮೂಲಪದ್ಯಗಳು
(ಮುಂದೆಯೂ ಇದೇ ಕ್ರಮವನ್ನು ಅನುಸರಿಸಿದೆ)

ಉದಾ: ೧

ಮೃಗಯಾ ವ್ಯಾಜದಿನೊರ್ಮೆ ಶಂತನು ತೊಱಲ್ತುರ್ಪಪಳಂಚಲ್ಕೆ ತ
ನ್ಮೃಗಶಾಬಾಕ್ಷಿಯ ಕಂಪು ತಟ್ಟೆ ಮಧುಪಂ ಬೋಲ್ ಸೋಲ್ತು ಕಂಡೊಲ್ದುನ ।
ಲ್ಮೆಗೆ ದಿಬ್ಯಂಡಿಐವಂತೆವೋಲ್ ಪಿಡಿದು ನೀನ್ ಬಾ ಪೋಪಮೆಂದಗೆ ಮೆ
ಲ್ಲಗೆ ತತ್ಕನ್ಯೆಕೆ ನಾಣ್ಚಿ ಬೇಡುವೋಡೆ ನೀವೆಯ್ಯನಂ ಬೇಡಿರೆ ॥

ಎಲ್.ಬಸವರಾಜು ಅವರ ಸರಳ ಪಂಪಭಾರತದಲ್ಲಿ–

ಆ ಯೋಜನಗಂಧಿಯನ್ನು ಶಂತನು ಮದುವೆಯಾದ; ಅದಕ್ಕೆ ಬ್ರಹ್ಮಚರ್ಯೆ ವ್ರತ ಹೊತ್ತು ವ್ಯವಸ್ಥೆ ಮಾಡಿದ ಭೀಷ್ಮ

ಮೃಗಯಾ ವ್ಯಾಜದಿನೊರ್ಮೆ ಶಂತನು ತೊಱಲ್ತುರ್ಪಂ
ಪಳಂಚಲ್ಕೆ ತನ್ಮೃಗ ಶಾಬಾಕ್ಷಿಯ ಕಂಪು–
ಕೃಷ್ಣ ಮಧುಪಂಬೊಲ್ ಸೋಲ್ತು,
ಕಂಡೊಲ್ದು,
ನಲ್ಮೆಗೆ ದಿವ್ಯಂಬಿಡಿವಂತೆ ಪಿಡಿದು–
ನೀಂ ಬಾ ಪೋಪಮ್ ಎಂದಂಗೆ
ಮೆಲ್ಲಗೆ ತತ್ ಕನ್ಯಕೆ ನಾಣ್ಚಿ–
ಬೇಡುವೊಡೆ ನೀವೆಮ್ಮಯ್ಯನಂ ಬೇಡಿರೇ ಎಂಬುದುಂ

ಉದಾ: ೨

ಕುವಳಯ ಬಾಂಧವನೆಸೆವನೆ ।
ಕುವಳಯಮಂ ಬೆಳಗಿ ಕುವಳಯಂ ಪೊಱಗೆನೆ ಪಾಂ
ಡವರೆ ಪೊಱಗಗಿ ನಿನಗೀ ।
ಕುವಳಯ ಪತಿಯೆಂಬ ಪೆಂಪೊಡಂಬಡೆ ನೃಪತೀ (೯.೩೭)

ಕುವಳಯ ಬಾಂಧವನ್ (= ಜಗದ್ಬಾಂಧವ, ಚಂದ್ರ) ಎಸೆವನೆ
ಕುವಳಯ (=ಜಗ) ಮಂ ಬೆಳಗಿ
ಕುವಳಯಂ (= ಕನ್ನೆದಿಲು) ಪೊಱಗಗೆ
ನಿನಗೆ ಈ ಕುವಳಯ ಪತಿ (=ಭೂಪತಿ) ಯೆಂಬ ಪೆಂಪು
ಒಡಂಬಡೆ (= ಒಪ್ಪಿತವೆ) ನೃಪತೀ ?

ಬಸವರಾಜು ಅವರು ತಮ್ಮ "ಸರಳ ಪಂಪಭಾರತ"ವನ್ನು ಅರ್ಥವಿನ್ಯಾಸದ ದೃಷ್ಟಿಯಿಂದ ೬೦ ಉಪಅಧ್ಯಾಯಗಳಾಗಿ ವಿಂಗಡಿಸಿಕೊಂಡಿದ್ದಾರೆ. ಆದರೆ ಆಶ್ವಾಸದಲ್ಲಾಗಲಿ ಮೂಲಕಥಾವರ್ಣನಾ ದೃಷ್ಟಿಯಿಂದಾಗಲಿ ಎಲ್ಲಿಯೂ ಚ್ಯುತಿಬಾರದಿರುವುದನ್ನು ಮರೆಯುವಂತಿಲ್ಲ.ಪಂಪನ ೧೪ ಆಶ್ವಾಸಗಳನ್ನು ಮೇಲೆ ಹೇಳಿದಂತೆ ಎಲ್ಲಿಯೂ ಭಂಗಬಾರದಂತೆ ಅನುಸರಿಸಲಾಗಿದೆ.ಅಂತಿಮವಾಗಿ ಕೃತಿಗೆ ಪೂರಕವಾದಂತೆ ಉಪಯುಕ್ತದ ೨ ಅನುಬಂಧಗಳನ್ನು ನೀಡಲಾಗಿದೆ.ಅನುಬಂಧ ೧ ರಲ್ಲಿ ಸುಮಾರು ೮೭ ಪುಟಗಳಷ್ಟು ವಿಸ್ತಾರವಾದ "ಸಾಂದರ್ಭಿಕ ಅರ್ಥಕೋಶ"ನೀಡಲಾಗಿದೆ.ಅನುಬಂಧ ೨ ರಲ್ಲಿ ಪಂಪನ ತಮ್ಮ ಜಿನವಲ್ಲಭನ ಶಾಸನವನ್ನು ಈ ಹಿಂದೆ ಸಂಗ್ರಹಿಸಿದ್ದ ಎಂ.ಎಂ.ಅಣ್ಣಿಗೇರಿ ಮತ್ತು ಆರ್.ಶೇಷಶಾಸ್ತ್ರೀ ಅವರಿಂದ ಪಡೆದು, ಎಂ.ಎಂ.ನಾಗರಾಜರಾವ್ ಅವರ ನೆರವಿನಿಂದ ಸರಳವಿನ್ಯಾಸದ ಮೂಲಕ ನೀಡಲಾಗಿದೆ. ಕಾಲ ಹಾಗೂ ಸರಳವಿವರದೊಂದಿಗೆ ಸರಳ ಪಂಪಭಾರತದ ಕ್ರಮದಂತೆಯೇ ಅರ್ಥಪಂಕ್ತಿಯುಕ್ತವಾಗಿ ಸರಳಗೊಳಿಸಿ ನೀಡಿದ್ದಾರೆ. ಈ ಶಾಸನದಿಂದ ಪಂಪನ ಹಲವು ಉಪಯುಕ್ತ ಮಾಹಿತಿ ದೊರಕಿದೆ ಎಂಬುದು ಎಲ್ಲಾ ಸಾಹಿತ್ಯಾಸಕ್ತರಿಗೂ ತಿಳಿದ ಸಂಗತಿ.ಆದರೆ ಒಂದು ಶಾಸನವನ್ನು ಸರಳವಿನ್ಯಾಸಗೊಳಿಸಿ ರಚಿಸಿರುವುದು ಸಂಶೋಧನಾ ಕ್ಷೇತ್ರದಲ್ಲಿಯೇ ವಿಶಿಷ್ಟಮಾದರಿ ಎಂಬುದು ಮನವರಿಕೆಯಾಗುತ್ತದೆ. ಎಲ್.ಬಸವರಾಜು ಅವರ ಮುಂದಿನ ಶಾಸನಶಾಸ್ತ್ರಜ್ಞರಿಗೆ ದಾರಿದೀಪವಾಗುವುದರಲ್ಲಿ ಸಂದೇಹವಿಲ್ಲ.

ಹೀಗೆ ಎಲ್. ಬಸವರಾಜು ಅವರು ಪಂಪಭಾರತ ಕೃತಿಯನ್ನು ವಿಶಿಷ್ಟವಾದ ಸರಳವಿನ್ಯಾಸದ ಮೂಲಕ ಜನಸಾಮಾನ್ಯರಿಗೆ ಓದಲು ಅನುಕೂಲವಾಗುವಂತೆ ರಚಿಸಿರುವುದು ಅವರ ಜನಪರಕಾಳಜಿಯ ದ್ಯೋತಕವಾಗಿದೆ.

# ಪಂಪನ ಸಮಸ್ತ ಭಾರತ ಕಥಾಮೃತ



ಡಾ. ಎಲ್. ಬಸವರಾಜು

## ೨. ಪಂಪನ ಸಮಸ್ತ ಭಾರತ ಕಥಾಮೃತ

ಪಂಪನ "ವಿಕ್ರಮಾರ್ಜುನ ವಿಜಯಂ"ವನ್ನು ಓದುಗರಿಗೆ ಅನುವಾಗುವಂತೆ ಸರಳಾನುವಾದ ಮಾಡಿ"ಸರಳ ಪಂಪಭಾರತ" ಕೃತಿ ರಚಿಸಿದ ಎರಡುವರ್ಷಗಳ ತರುವಾಯ ಎಲ್.ಬಸವರಾಜು ಅವರು ಅದರ ಕಥಾಮೃತ ಜನರಿಗೆ ದರ್ಶಿಸಬೇಕೆಂಬ ಮನೋಗತದ ಪ್ರತೀಕವೇ "ಪಂಪನ ಸಮಸ್ತ ಭಾರತ ಕಥಾಮೃತ" ಕೃತಿಯಾಗಿದೆ.

ಎಲ್.ಬಸವರಾಜು ಅವರ ಪಂಪನ ಅಧ್ಯಯನದ ಬಗ್ಗೆ ಹಾಗೂ ಈ ಕೃತಿಯ ಬಗ್ಗೆ ಪ್ರೊ.ಮಲ್ಲೇಪುರಂ.ಜಿ.ವೆಂಕಟೇಶ್ ಅವರು "ಡಾ.ಎಲ್.ಬಸವರಾಜು ಪಂಪ ಮಹಾಕವಿಯ ಪ್ರಿಯರು.ಅವರು ಪಂಪನ ಆದಿಪುರಾಣ ಮತ್ತು ಪಂಪಭಾರತವನ್ನು ತಲಸ್ಪರ್ಶಿಯಾಗಿ ಅಭ್ಯಾಸ ಮಾಡಿದವರು. ವಿದ್ವಾಂಸರಾದ ಎಲ್.ಬಸವರಾಜು ಅವರು "ಆದಿಪುರಾಣಂ"ಕೃತಿಯನ್ನು ಸಂಪಾದಿಸಿದ ವಿಧಾನವೇ ಕನ್ನಡಿಗರಿಗೆ ಅಪೂರ್ವ ಎನಿಸಿದೆ. 'ಪಂಪಭಾರತಂ' ಕೃತಿಯ ಮೈಯನ್ನು ನಮ್ಮ ಕಾಲದ ನುಡಿಗೆ ಛಾಯಾನುವಾದ ಗೊಳಿಸಿರುವ ಕ್ರಮ ವಿಶಿಷ್ಟವಾಗಿದೆ. ಸಂಸ್ಕೃತ ವ್ಯಾಸಭಾರತವನ್ನು ಕನ್ನಡಕ್ಕೆ ಅಚ್ಚುಕಟ್ಟಾಗಿ ಕೂರಿಸಿದ ರೀತಿ ಪಂಪನದಾಗಿದ್ದರೆ; ಆ ಮಹಾ ಕೃತಿಯನ್ನು ಹೊಸಗನ್ನಡಕ್ಕೆ ಅವತರಣಗೊಳಿಸಿರುವ ಕ್ರಮ ಎಲ್.ಬಸವರಾಜು ಅವರದೇ ಆಗಿದೆ.ಹೀಗೆ ಪಂಪಮಹಾಕವಿಯು ಎಲ್. ಬಸವರಾಜು ಅವರ ಮೂಲಕ ಸಮಕಾಲೀನನಾಗಿದ್ದಾನೆ. "ಪಂಪನ ಸಮಸ್ತ ಭಾರತ ಕಥಾಮೃತ" ಹೆಸರಿಗೆ ಅನ್ವರ್ಥವಾಗಿದೆಯಷ್ಟೆ. ಅದು "ಕಥಾಮೃತ" ಆಗಿರುವುದು ಕನ್ನಡದ ಭಾಗ್ಯ. ಈ ಭಾಗ್ಯಕ್ಕೆ ಕಾರಣರಾದವರು ಪಂಪಪ್ರಶಸ್ತಿ ಪುರಸ್ಕಾರ ಪಡೆದ ಡಾ.ಎಲ್.ಬಸವರಾಜು ಅವರು"[೧] ಎಂದಿದ್ದಾರೆ.

ಎಲ್.ಬಸವರಾಜು ಅವರ "ವಿಕ್ರಮಾರ್ಜುನ ವಿಜಯಂ"ದ ಅಧ್ಯಯನದ ಫಲವಾಗಿ ಈ ಕೃತಿ ಒಡಮೂಡಿದೆ.ಅವರೇ ಹೇಳುವಂತೆ" ಆ ಪಂಪಭಾರತದಂಥ ಅಪೂರ್ವ ಕಾವ್ಯದ ಸೊಗಸು ಕನ್ನಡಿಗರಿಗೆ, ಪಂಡಿತರಲ್ಲವೆಂಬ ಒಂದು ಕಾರಣಕ್ಕಾಗಿಯೇ ಆಗಲಿ ದಕ್ಕದೇ ಹೋಗುವಂತಾಗಬಾರದು ಎಂಬ ವಾಂಛೆಯಿಂದ, ಅದರ ಹಳಗನ್ನಡವನ್ನು ಸರಳ ಕನ್ನಡಕ್ಕೆ ಛಾಯಾನುವಾದ ಮಾಡಿ ಕ್ರಿ.ಶ.ಮೂರನೇ ಸಹಸ್ರಮಾನದ ಕಾಣಿಕೆಯನ್ನಾಗಿ ಕನ್ನಡದ ಸೋದರ ಸೋದರಿಯರಿಗೆ ಈಗ ಅರ್ಪಿಸುತ್ತಿದ್ದೇನೆ".[೨] ಮುಂದುವರೆದು "ಇಡಿಯಾಗಿ ವ್ಯಾಸಭಾರತದ ಕಥೆ ಪಂಪ ಹೇಳಿದಂತೆ ಯಥಾವತ್ತಾಗಿ ಚಾಚುತಪ್ಪದೆ ಹಳಗನ್ನಡದಿಂದ ಹೊಸಗನ್ನಡಕ್ಕೆ ಛಾಯಾನುವಾದಗೊಂಡು ಮೈಗೆಡದೆ ಮೈತಳೆದೀಗ ನಿಮ್ಮ ಕೈಯಲ್ಲಿದೆ"[೩]–ಎನ್ನುವುದರೊಂದಿಗೆ ಕೃತಿಯ ಸ್ಥೂಲರೂಪದರ್ಶನ ಮಾಡಿಸಿದ್ದಾರೆ.

-------------------

೧. ಮಲ್ಲೇಪುರಂ ಜಿ. ವೆಂಕಟೇಶ, **ಪಂಪನ ಸಮಸ್ತ ಭಾರತ ಕಥಾಮೃತ** ಅಕ್ಷರ ಸೂರ್ಯನಿಗೆ ನಮನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ದ್ವಿತೀಯ ಮುದ್ರಣ ೨೦೦೧

೨. ಎಲ್.ಬಸವರಾಜು, **ಪಂಪನ ಸಮಸ್ತ ಭಾರತ ಕಥಾಮೃತ** ಅರಿಕೆ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ದ್ವಿತೀಯ ಮುದ್ರಣ ೨೦೦೧

೩. ಎಲ್.ಬಸವರಾಜು, **ಪಂಪನ ಸಮಸ್ತ ಭಾರತ ಕಥಾಮೃತ** ಅರಿಕೆ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ದ್ವಿತೀಯ ಮುದ್ರಣ ೨೦೦೧

ಪ್ರಸ್ತುತ ಕೃತಿಗೆ ಮುನ್ನುಡಿ ಬರೆದಿರುವ ಡಿ.ಟಿ.ಬಸವರಾಜು ಅವರು ಪಂಪನ 'ವಿಕ್ರಮಾರ್ಜುನ ವಿಜಯಂ'ಕೃತಿಯ ವಿಶಿಷ್ಟತೆ, ಸಂಕೀರ್ಣತೆ ಹಾಗೂ ಮಹತ್ತನ್ನು ವಿವರಿಸಿ, ತದನಂತರ ಇಂತಹ ಮಹಾಕಾವ್ಯವನ್ನು ತಲಸ್ಪರ್ಶಿಯಾಗಿ ಪರಿಶೋಧಿಸಿ ಜನಸಾಮಾನ್ಯರೆಡೆಗೆ ಮುಖಮಾಡಲು ಕಾರಣರಾದ ಎಲ್.ಬಸವರಾಜು ಅವರ ಸಾಹಿತ್ಯ ಕಾರ್ಯವನ್ನು ಕುರಿತು–"ಇಂಥ ಎಲ್ಲ ಗುಣಗಳನ್ನೂ ಹೊಂದಿರುವ "ಕವಿತಾಗುರ್ಣಾವ"ಪಂಪನ ಈ ಕಾವ್ಯ ಕ್ರಿ.ಶ.ಮೊದಲನೇ ಸಹಸ್ರಮಾನದ ಕಡೆಯ ಶತಮಾನದಲ್ಲಿ ರಚಿತವಾಗಿ, ಈ ಮೂರನೇ ಸಹಸ್ರಮಾನದ ಮೊದಲನೇ ಶತಮಾನದ ಮೊಟ್ಟಮೊದಲಿಗೆ ಈ ತಿರುಳುಗನ್ನಡದ ದೇಹವನ್ನು ತ್ಯಜಿಸಿ, ಈ ಸಮಕಾಲೀನ ಸರಳಗನ್ನಡದ ಮರುದೇಹವನ್ನು ಧರಿಸಿ, ಎಲ್.ಬಸವರಾಜು ಅವರ ಮಾನಸಗರ್ಭದಲ್ಲಿ ಅವತರಿಸಿ ಸಹೃದಯ ಕನ್ನಡಿಗರ ಕರಕಮಲದಲ್ಲಿ ವಿರಾಜಮಾನವಾಗಿರುವುದು ಒಂದು ಪವಾಡದಷ್ಟೆ ಅದ್ಭುತ!"[೪] ಎಂದಿದ್ದಾರೆ. ಇದರಿಂದ ಕೃತಿಯ ಮಹತ್ವ ಹಾಗೂ ಪ್ರಸ್ತುತತೆ ಗೋಚರವಾಗುತ್ತದೆ. ಮುಂದುವರಿದು ಡಿ.ಟಿ.ಬಸವರಾಜು ಅವರು ಪ್ರಾಚೀನ ಕನ್ನಡಕಾವ್ಯಗಳು ಆಧುನಿಕ ವಿದ್ವಾಂಸರಿಂದ ಅನಾದರಕ್ಕೊಳಗಾಗುವುದಕ್ಕೆ ಭಾಷಾಸ್ವರೂಪವೇ ಮೂಲಕಾರಣವೆಂದು ಸೂಚಿಸಿ,ಇಂತಹ ಅನಾದರಗಳಿಂದ ಕನ್ನಡಸಾಹಿತ್ಯ ಮತ್ತು ಸಂಸ್ಕೃತಿಗಾದ ನಷ್ಟವನ್ನರಿತು ವಿಷಾದಿಸುತ್ತಾರೆ. ಅದಕ್ಕಾಗಿ ಪ್ರಾಚೀನಸಾಹಿತ್ಯಕ್ಕೆ ಹಿಡಿದಿರುವ ಭಾಷಾಭೂತವನ್ನು ಬಿಡಿಸಿ ವರ್ತಮಾನದ ಅನ್ಯೋನ್ಯ ರೂಪವಾಸ್ತವ್ಯವನ್ನು ಅದಕ್ಕೆ ಅಳವಡಿಸಿ ಅದನ್ನು ಅದಕ್ಕೆ ಅಣಿಮಾಡಬೇಕಾಗಿರುವುದು ನಮಗೆ ತೀರ ತುರ್ತಿನ ಕಾರ್ಯವೇ ಆಗಿದೆ ಎಂದಿದ್ದಾರೆ. ಹೀಗಾಗಿ ಎಲ್.ಬಸವರಾಜು ಅವರ ಈ ಕೃತಿಯನ್ನು ಮುಕ್ತಕಂಠದಿಂದ ಶ್ಲಾಘಿಸಿದ್ದಾರೆ.

ಎಲ್.ಬಸವರಾಜು ಅವರ ಈ ಕೃತಿರಚನೆಗೆ ಮುನ್ನವೇ ಮುಳಿಯ ತಿಮ್ಮಪ್ಪಯ್ಯನವರು ಪಂಪಭಾರತವನ್ನು 'ಸಮಸ್ತ ಭಾರತ ಸಾರ' ಎಂಬುದಾಗಿ ಹಳಗನ್ನಡಗದ್ಯಕ್ಕೆ ರೂಪಾಂತರಿಸಿದ್ದರು ಹಾಗೂ ಡಿ.ಎಲ್.ನರಸಿಂಹಾಚಾರ್ಯರು "ಪಂಪಭಾರತ ದೀಪಿಕೆ"ಯೊಂದನ್ನು ರಚಿಸಿದ್ದರು. ಇವರುಗಳಲ್ಲಿ ಮುಳಿಯ ತಿಮ್ಮಪ್ಪಯ್ಯನವರು ಪಂಪನ ಕೃತಿಗಳನ್ನು ಆಮೂಲಾಗ್ರವಾಗಿ ಶೋಧಿಸಿ ನಡೆಸಿದ ಕಾರ್ಯಮೆಚ್ಚತಕ್ಕದ್ದಾಗಿದೆ. ಆದರೆ ಅವರು ಪಂಪಭಾರತವನ್ನು ಹಳಗನ್ನಡಗದ್ಯಕ್ಕೆ ರೂಪಾಂತರಿಸಿರುವುದು ಪ್ರಸ್ತುತ ಸಮಸ್ಯೆಗೆ ಪರಿಹಾರ ದೊರಕಿಸದೆ ಸಮಸ್ಯೆಯಾಗಿಯೇ ಇರಿಸಿದಂತೆ ಭಾಸವಾಗುತ್ತದೆ.ಚಂಪೂಕಾವ್ಯವನ್ನು ಗದ್ಯಕ್ಕೆ ರೂಪಾಂತರಿಸಿರುವುದು ಸುಧಾರಿತ ಪ್ರಯತ್ನವಾದರೂ ಭಾಷಾಸ್ವರೂಪದ ಗೊಂದಲವನ್ನು ನಿವಾರಿಸುವಲ್ಲಿ ಮುಳಿಯತಿಮ್ಮಪ್ಪಯ್ಯನವರ "ಸಮಸ್ತ ಭಾರತ ಸಾರ' ವಿಫಲವಾಗಿದೆ. ತರುವಾಯದ ಡಿ.ಎಲ್.ಎನ್‌ರ "ಪಂಪಭಾರತದೀಪಿಕೆ" ಪಂಪಭಾರತದ ಪ್ರತಿಪದದ ಅರ್ಥಸೂಚಿಸುವ ಶಬ್ದಾರ್ಥಭಂಡಾರವೆನಿಸಿ, ವ್ಯಾಕರಣ, ಛಂದಸ್ಸು ಮೊದಲಾದವುಗಳ ಚರ್ಚೆಯನ್ನೊಳಗೊಂಡಿದೆ. ಅಂದರೆ ಡಿ.ಎಲ್.ಎನ್ ರ 'ಪಂಪಭಾರತದೀಪಿಕೆ' ಪಂಪಭಾರತದೀಪಿಕೆ ಪಂಪಭಾರತಕ್ಕೆ ಟೀಕು ರಚಿಸುವ ಕಾರ್ಯವಾಗಿದೆಯೇ ಹೊರತು ಕಥಾಸಾರವನ್ನು ಹೇಳಿಲ್ಲ. ಆದರೆ ಪ್ರತಿಪದಕ್ಕೆ ಅರ್ಥಹುಡುಕುವುದು ಸುಲಭಕಾರ್ಯವಲ್ಲ. ಸಾಕಷ್ಟು ಪರಿಶ್ರಮ, ಹಳಗನ್ನಡದ (ಸ್ವರೂಪ), ಇವುಗಳ ಸತತ ಅಧ್ಯಯನದಿಂದ ಮಾತ್ರ

---

೪. ಡಿ.ಟಿ.ಬಸವರಾಜು, **ಪಂಪನ ಸಮಸ್ತ ಭಾರತ ಕಥಾಮೃತ** ಮುನ್ನುಡಿ ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು ದ್ವಿತೀಯ ಮುದ್ರಣ ೨೦೦೧

ಸಾಧ್ಯವಾಗುವಂತಹದು. ಅದರಿಂದ ಡಿ.ಎಲ್.ನರಸಿಂಹಾಚಾರ್‌ರ ಈ ಕೃತಿ ಸ್ತುತ್ಯಾರ್ಯವಾದುದು.ಆದರೆ ಇಲ್ಲಿ ಪ್ರತಿಪದದ ಅರ್ಥತಿಳಿದು ಅನಂತರ ವಾಚಕರು ಕಥಾಸಾರವನ್ನು ಅರ್ಥೈಸಿಕೊಳ್ಳಬೇಕಾಗುತ್ತದೆ.

ಆದರೆ ಎಲ್.ಬಸವರಾಜು ಅವರ ಈ ಕೃತಿ ಮೇಲಿನ ಎರಡೂ ಕೃತಿಗಳಿಗಿಂತ ಭಿನ್ನವಾದುದು ಹಾಗೂ ವಿಶಿಷ್ಟವಾದುದು. ಎಲ್.ಬಸವರಾಜು ಅವರು ಈ ಕೃತಿಯಲ್ಲಿ ಪಂಪನ ಮೂಲಭಾರತಕ್ಕೆ ಚ್ಯುತಿಬಾರದಂತೆ ಆಶ್ವಾಸಾದಿಯಾಗಿ ಪ್ರತಿಪದ್ಯದ ತಾತ್ಪರ್ಯವನ್ನು ಸಂಕ್ಷೇಪವಾಗಿ ಹಾಗೂ ಪ್ರತ್ಯೇಕವಾಗಿ ಸೂಚಿಸಿದ್ದಾರೆ. ಇದರಿಂದ ಒಂದು ಪದ್ಯದಲ್ಲಿನ ಪೂರ್ಣಸಾರ ಅನುಕ್ರಮವಾಗಿ ಬಿಂಬಿತವಾಗಿದೆ. ಅದಕ್ಕಾಗಿಯೇ ಎಲ್.ಬಸವರಾಜು ಅವರು ಇದನ್ನು ಮೂಲಕೃತಿಯ ಛಾಯಾನುವಾದ ಎಂದಿರುವುದು.

ಅರ್ಥಸ್ಪಷ್ಟತೆಯ ದೃಷ್ಟಿಯಿಂದ ಎಲ್.ಬಸವರಾಜು ಅವರು ಈ ಕೃತಿಯಲ್ಲಿ ಪದ್ಯಗಳಲ್ಲಿನ ಸಾರವನ್ನು(ಪ್ರತಿ)ಪದ್ಯದ ಶೀರ್ಷಿಕೆಯಡಿ ತಿಳಿಸಿ, ಅನಂತರ ಪದ್ಯದಲ್ಲಿನ ಸಾರಂಶವನ್ನು ಹೊಸಗನ್ನಡದಲ್ಲಿ ಸರಳವಾಗಿ ತಿಳಿಸಿದ್ದಾರೆ.ಇದರಿಂದ ಪಂಪನ ಕೃತಿಯ ತಾತ್ಪರ್ಯ ಎಲ್ಲೆಡೆ ಅಗತ್ಯವಾಗಿ ದೊರಕುತ್ತದೆ. ಕೃತಿಯಲ್ಲಿ ಎಲ್.ಬಸವರಾಜು ಅವರು ಕಥೆಯ ವಿನ್ಯಾಸದ ದೃಷ್ಟಿಯಿಂದ ಸರಳಪಂಪಭಾರತದಲ್ಲಿ ವಿಂಗಡಿಸಿಕೊಡು ೭೦ ಉಪಅಧ್ಯಾಯಗಳಾಗಿ ವಿಭಾಗಿಸಿದ್ದಾರೆ. ಇದು ಅರ್ಥಾಭಿವ್ಯಕ್ತಿಯ ದೃಷ್ಟಿಯಿಂದಲೇ ಹೊರತು ಮೂಲಕ್ಕೆ ಎಲ್ಲಿಯೂ ಚ್ಯುತಿಬಂದಿಲ್ಲ ಎಂಬುದನ್ನು ಮರೆಯಬಾರದು.ಗದ್ಯ ಬಂದೆಡೆ ಆ ಗದ್ಯದ ಹಿಂದಿನ ಪದ್ಯದ ಸಂಖ್ಯೆಯನ್ನು ಸೂಚಿಸಿ ಅದರ 'ವಚನ'ವೆಂದು ಸಂಕೇತಿಸಲಾಗಿದೆ. ಹೀಗೆ ೧೪ ಆಶ್ವಾಸದಂತ್ಯದವರೆಗೂ ಎಲ್ಲಿಯೂ ಚ್ಯುತಿಬಾರದಂತೆ ಪದ್ಯಕ್ಕನುಗುಣವಾಗಿ ಅರ್ಥವನ್ನು ಕಲ್ಪಿಸಲಾಗಿದೆ. ಛಂದೋಬಂಧಿತವಾಗಿರುವ ಮೂಲಕೃತಿ ಕೆಲವೆಡೆ ಅರ್ಥಸಂದಿಗ್ದತೆ ಎಡೆಮಾಡಿಕೊಡುತ್ತವೆ. ಇಂತಹ ಕಡೆಗಳಲ್ಲಿ ವಾಚಕರಿಗೆ ಸುಲಭವಾಗುವಂತೆ ಅರ್ಥಸ್ಪಷ್ಟತೆಗಾಗಿ ದುಂಡುಕಂಸಾಂತರ್ಗತದಲ್ಲಿ ಅದಕ್ಕೆ ತಕ್ಕ ಸಂಬಂಧಕಲ್ಪಿಸಿ ಅರ್ಥೈಸಲಾಗಿದೆ. ಪಾಠಾಂತರಗಳನ್ನು(= )"ಚಿಹ್ನೆಯ ಮೂಲಕ ಹಾಗೂ ಅಗತ್ಯವಿದ್ದೆಡೆ ಕೆಲವು ಲೇಖನಸೂಚಿಗಳನ್ನು ಯಥೋಚಿತವಾಗಿ ನೀಡಲಾಗಿದೆ.ಇದರಿಂದ ವಾಚಕರಿಗೆ ಎಲ್ಲಿಯೂ ತೊಂದರೆಯಾಗದಂತೆ ಸುಗಮವಾಗಿ ಕಥಾಸಾರತಿಳಿಯಲು ಸಹಾಯವಗುತ್ತದೆ.ಹೀಗೆ ಎಲ್.ಬಸವರಾಜು ಅವರು "ಪಂಪನ ಸಮಸ್ತಭಾರತ ಕಥಾಮೃತ"ಕೃತಿ ಹೆಸರೇ ಸೂಚಿಸುವಂತೆ ಸಾಹಿತ್ಯಾಸಕ್ತ ಸಹೃದಯ ಜನಸಾಮಾನ್ಯರಿಗೆ ಪಂಪಭಾರತದ ಕಥಾಮೃತ ಸವಿಯುವಲ್ಲಿ ಬಹುತೇಕ ಯಶಸ್ವಿಯಾಗಿದೆ. ಕೃತಿಯಲ್ಲಿ ಅನುಸರಿಸಿರುವ ವಿಧಾನವನ್ನು ಕೆಲವು ಸೂಕ್ತ ಉದಾಹೃತಭಾಗಗಳ ಮೂಲಕ ಸ್ಪಷ್ಟಪಡಿಸಿಕೊಳ್ಳಬಹುದು.

ಉದಾ:೧

ಕುಲಮನೆ ಮುನ್ನಮುಗ್ಗಪಿಡಿಪಿರೇಂ ಗಳ,ನಿಮ್ಮ ಕುಲಗಳಾಂತ ಮಾ
ರ್ಮಲೆವನನ್ ಅಟ್ಟಿತಿಂಬುವೆ,ಕುಲಂ ಕುಲಮಲ್ತು:ಚಲಂ ಕುಲಂ ಗುಣಂ
ಕುಲಂ ಅಭಿಮಾನಂ ಕುಲಂ ಅಣ್ಮುಕುಲಂ ಬಗೆವಾಗಳ್ ಈಗಳ್ ಈ
ಕಲಹದೊಳಣ್ಣ ನಿಮ್ಮಕುಲವಕುಲಮಂ ನಿಮಗುಂಟು ಮಾಡುಗುಂ
(೧೦-೨೧)

ಬಸವರಾಜು ಅವರ ಕಥಾಮೃತದಲ್ಲಿ ಹಿಡಿದಿಟ್ಟಿರುವ ಕಥಾಸಾರದ ಪರಿ-

(ನೀವು)ಕುಲವನ್ನೇ ಏತಕ್ಕೆ ಮಾತಿಗೆ ಮಾತಿಗೆ ಮುಂಚೆ ಎತ್ತಿ ಮಾತನಾಡುತ್ತೀರಿ? ನಿಮ್ಮ ಕುಲಗಳೇ ಶತ್ರುಸೈನ್ಯವನ್ನು ಎದುರಿಸಿ ಅಟ್ಟಿಸಿಕೊಂಡು ಹೋಗಿ ತಿನ್ನುತ್ತವೇನು? ಕುಲ ಕುಲವಲ್ಲ-ಚಲವೆಂಬುದು ಕುಲ, ಗುಣವೆಂಬುದು ಕುಲ, ಅಭಿಮಾನವೆಂಬುದೊಂದಿದೆಯಲ್ಲಾ ಅದು ಕುಲ, ಶೌರ್ಯವೆಂಬುದು ಕುಲ! (ನೀವು) ನೋಡುತ್ತಿರಿ-ಈ ಯುದ್ಧದಲ್ಲಿ ನಿಮ್ಮ ಕುಲ ನಿಮಗೆ ವ್ಯಾಕುಲವನ್ನು ಉಂಟು ಮಾಡದೇ ಬಿಡದು.(೧೦.೨೧)

ಉದಾ:೨

ವII ಅಂತು ಪರಶುರಾಮನನಂಜಿಸಿದ ವೀರಂಗೆ ವೀರಪಟ್ಟಮಂ ಕಟ್ಟಿ ಪಗೆವರನೆನ
ಮಂಚದ ಕಾಲೊಳ್ ಕಟ್ಟಿದೆನೆಂದು ಪೊಟ್ಟಳಿಸುವ ಸುಯೋಧನನ ನುಡಿಯನವಕರ್ಣಿಸಿ
ಕರ್ಣನಿಂತೆಂದಂ-

(೧೦-೧೫ವ)

**ಕರ್ಣನು ಭೀಷ್ಮರನ್ನು ಗೇಲಿ ಮಾಡಿದ**

ಅಂತು, ಪರಶುರಾಮನನ್ನು ಅಂಜಿಸಿದ ವೀರನಿಗೆ ವಿರಪಟ್ಟವನ್ನು ಕಟ್ಟಿ ಹಗೆಗಳನ್ನು ತನ್ನ ಮಂಚದ ಕಾಲಿಗೆ ಕಟ್ಟದನೆಂದು ಬೀಗುವ ದುರ್ಯೋಧನನ ಮಾತನ್ನು ಉಪೇಕ್ಷೆಯಿಂದ ಕೇಳಿಸಿ ಕೊಂಡು ಅವನಿಗೆ ಕರ್ಣನು ಈ ಮುಂದಿನಂತೆಂದನು (೧೦.೧೫ವ)

ಉದಾ:೩

ಮುಳಿದು ತನಗರ್ಘ್ಯ ಮೆತ್ತಿದ
ತಳಿಗೆಯೊಳಿಡೆ ತೆಱೆದ ತೆಱದೆ ತಲೆ ಪಱಿದಾಗಳ್
ಕಳಕಳಿಸಿ ನಗುತಮಿರ್ದುದು
ತಳಿಗೆಯ ಮೇಲೆ ಅರಸನದಟಿದೇನಚ್ಚರಿಯೋ (೬.೬೪)

ಮುನಿದು, ತನಗೆ ಅರ್ಘ್ಯವೆತ್ತಿದ ತಳಿಗೆಯನ್ನೇ ಎತ್ತಿ ಬೀಸಲು - ಸವರಿದ ತರದಲ್ಲಿ (ಶಿಶುಪಾಲನ) ತಲೆ ಕತ್ತರಿಸಿ ಹೋಯಿತು. ಆಗಲೂ ಕಳಕಳ ನಗುತ್ತಲೇ ಇತ್ತು ಆ ತಲೆ ತಳಿಗೆಯ ಮೇಲೆ! ರಾಕ್ಷಸನ ಅಹಂಕಾರ ಅದೆಷ್ಟು ಆಶ್ಚರ್ಯಕರ! (೬.೬೪)

ಎಲ್.ಬಸವರಾಜು ಅವರ ಈ ಕೃತಿಯ ತರುವಾಯ ಪಂಪನ ಭಾರತಕಥೆಯ ಸಾರವನ್ನು ಹೊಸಗನ್ನಡದಲ್ಲಿ ಸರಳರೂಪದಲ್ಲಿ ತರುವ ಪ್ರಯತ್ನಗಳು ಸಾಕಷ್ಟು ನಡೆಯುತ್ತಿವೆ.ಅವುಗಳಲ್ಲಿ ಎಚ್.ಸಿದ್ಧಲಿಂಗಯ್ಯನವರ 'ವಚನ ಪಂಪಭಾರತ' ಕೃತಿಯನ್ನು ನೆನೆಯಬಹುದಾಗಿದೆ. ಸಂವಹನ ಪ್ರಕಾಶನದಿಂದ ಪ್ರಕಟವಾದ ಈ ಕೃತಿ, ಎ.ಅರ್.ಕೃಷ್ಣಶಾಸ್ತ್ರೀ ಅವರ 'ವಚನಭಾರತ' ಕೃತಿಯನ್ನು ನೆಪಿಗೆತರುತ್ತದೆ. ಪಂಪಭಾರತದ ಕಥಾಹಂದರ ಆಶ್ವಾಸಾದಿಯಾಗಿ ಏಕರೀತಿಯಲ್ಲಿ ವಿವರಿಸುವುದರೊಂದಿಗೆ ಕೃತಿ ರಚನೆಯಾಗಿದೆ. ಅಂದರೆ ಇಲ್ಲಿ ಪಂಪಭಾರತದ ಪ್ರತಿಪದ್ಯಾರ್ಥಕ್ಕೆ ಒತ್ತುಕೊಡದೆ ಒಟ್ಟು ಕಥೆಯನ್ನಷ್ಟೆ ಮುಖ್ಯವಾಗಿಟ್ಟುಕೊಂಡು ರಚಿಸಲಾಗಿದೆ. ಇದು ಪಂಪಭಾರತದ ಸಾರ ಎನ್ನುವುದಕ್ಕೆ ಯೋಗ್ಯವಾಗಿದೆ.

ಪಂಪನ ಭಾರತದ ಬಗ್ಗೆ ಈವರೆಗೆ ಹಲವಾರು ಸಂಶೋಧನೆ,ವಿಮರ್ಶೆ,ಸರಳಾನುವಾದ ಕಾರ್ಯಗಳು ಅವಿರತವಾಗಿ ನಡೆಯುತ್ತಿದ್ದರೂ,ಪಂಪನ ಮೂಲಕೃತಿಗೆ ಚ್ಯುತಿಬಾರದಂತೆ ಕಥಾಮೃತವಾಗಿಸಿರುವ ಎಲ್.ಬಸವರಾಜು ಅವರ ಈ ಕೃತಿ ಕನ್ನಡಸಾಹಿತ್ಯದಲ್ಲಿ ಒಂದು ಮೈಲಿಗಲ್ಲು ಎಂಬುದರಲ್ಲಿ ಯಾವುದೇ ಸಂದೇಹವಿಲ್ಲ.

### ೩. ಪಂಪನ ಸರಳ ಆದಿಪುರಾಣ

ಪಂಪನ ಲೌಕಿಕಕಾವ್ಯವಾದ 'ವಿಕ್ರಮಾರ್ಜುನ ವಿಜಯಂ'ವನ್ನು ಸರಲಾನುವಾದ ಮತ್ತು ಛಾಯಾನುವಾದ ಮಾಡಿದ ತರುವಾಯ ಎಲ್.ಬಸವರಾಜು ಅವರು ಪಂಪನ ಆಗಮಿಕ ಕಾವ್ಯವಾದ 'ಆದಿಪುರಾಣಂ' ಕೃತಿಯನ್ನು ಸರಳಾನುವಾದ ಮಾಡುವ ಮೂಲಕ ಪಂಪನ ಕೃತಿಗಳೆರಡೂ ಜನಸಾಮಾನ್ಯರು ಓದಲು ಸುಲಭಸಾಧ್ಯವಾಗುವಂತೆ ಮಾಡಿದ್ದಾರೆ. ಇದರ ಮೂರ್ತರೂಪವೇ 'ಪಂಪನ ಸರಳ ಆದಿಪುರಾಣ' ಕೃತಿಯಾಗಿದೆ.

'ಆದಿಪುರಾಣಂ' ಸಂಸ್ಕೃತ ಮಹಾಪುರಾಣದ ಪ್ರೇರಣೆಯಿಂದ ರಚಿತವಾದ ಕೃತಿಯಾಗಿದೆ. ಇದು ಕನ್ನಡದ ಹಾಗೂ ಜೈನಧರ್ಮದ ಆದಿ ಅಧಿಕೃತದಾಖಲೆ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಇಲ್ಲಿ ಜೈನಪಾರಿಭಾಷಿಕತೆಗಳು ಹಾಸುಹೊಕ್ಕಾಗಿವೆ. ಭವಾವಳಿಗಳು, ಪಂಚಕಲ್ಯಾಣ, ದಾನಧರ್ಮ, ವೈರಾಗ್ಯ, ಧ್ಯಾನ ಮತ್ತು ತಪಸ್ಸುಗಳ ಕುಲುಮೆಯಲ್ಲಿ ಬೆಂದ ಜೀವ ಆತ್ಮೋದ್ಧಾರಕ್ಕಾಗಿ ನಡೆಯುವ ಪ್ರಯತ್ನ ಇಲ್ಲಿದೆ. ಒಂದರ್ಥದಲ್ಲಿ ಈ ಕೃತಿ ಮಾನವನ ಆತ್ಮವಿಕಾಸದ ಯಾತ್ರೆ. ಇಂತಹ ಧಾರ್ಮಿಕಸಂಕೋಲೆಗಳಿಂದ ಬಂಧಿತವಾಗಿರುವ ಈ ಕೃತಿಯನ್ನು ಪ್ರವೇಶಿಸುವುದು ಅಷ್ಟು ಸುಲಭವಲ್ಲ.ಆದರೆ ಕಾವ್ಯಧರ್ಮ ಸತ್ವದಿಂದಲೂ ಪ್ರಕಾಶಿಸುತ್ತಿರುವುದನ್ನು ಅಲ್ಲಗಳೆಯುವಂತಿಲ್ಲ. ಆದರೆ 'ಆದಿಪುರಾಣಂ'ಕೃತಿ ಧಾರ್ಮಿಕ ಪರಿಭಾಷೆ ಹಾಗೂ ಭಾಷಾಸ್ವರೂದ ಹಿನ್ನಲೆಯಲ್ಲಿ ಆಧುನಿಕ ವಿದ್ವಾಂಸರಿಂದ ಅನಾದರಕ್ಕೆ ಒಳಗಾಗಿದ್ದು ವಿಪರ್ಯಾಸದ ಸಂಗತಿ. ಇದನ್ನು ಅರ್ಥೈಸಿಕೊಳ್ಳುವುದು ಪಂಡಿತ ವಿದ್ವಾಂಸರನ್ನು ಬಿಟ್ಟರೆ ಸಾಧ್ಯವಾಗುತ್ತಿರಲಿಲ್ಲ. ಇಂತಹ ಕೊರತೆಯ ಪರಿಹಾರವಾಗಿ ಎಲ್.ಬಸವರಾಜು ಅವರ ಈ ಕೃತಿ ಹೊರಬಂದಿದೆ.

ಎಲ್.ಬಸವರಾಜು ಅವರು ಕೃತಿಯ ಆರಂಭದ ಅರಿಕೆಯಲ್ಲಿ ನೀವೇದಿಸುವಂತೆ– "ಎಲ್ಲರೂ ಅಕ್ಷರಸ್ಥರಾಗಬೇಕು, ಓದಬೇಕು, ಕನ್ನಡದ ಮೇಲೆ ಕನ್ನಡದ ಕಾವ್ಯಗಳ ಮೇಲೆ ಪ್ರೀತಿ ಬೆಳೆಸಿಕೊಳ್ಳಬೇಕು–ನಮ್ಮ ಸಂಸ್ಕೃತಿ, ನಮ್ಮ ಚರಿತ್ರೆ, ನಮ್ಮ ಹಿರಿಮೆಯನ್ನು ಗುರುತಿಸಿಕೊಂಡು–ದೊಡ್ಡ ಜನವಾಗಿ ಬದುಕಬೇಕೆಂಬ– ಈ ತುರ್ತುಸಂದರ್ಭದಲ್ಲಿ ಒಣಪಂಡಿತರ ಪುರೋಹಿತಷಾಹಿಯ ಕೈಗೆ ನಮ್ಮ ಬುದ್ಧಿಯನ್ನು ಕೊಟ್ಟು ಈ ಲೋಕದ ಮೊದಲ ವಾರಸುದಾರರದ ಸಾಮಾನ್ಯಜನರನ್ನು ಪರಧೀನವಾಗಿಯೇ ನಡೆಸಬೇಕೆನ್ನುವುದು,ಅದನ್ನು ಒಪ್ಪುವುದು ಆತ್ಮಘಾತುಕವಲ್ಲದೆ ಮತ್ತೇನೂ ಅಲ್ಲ"[೧] ಎಂದೂ, "ಈ ಹಿನ್ನಲೆಯಲ್ಲಿ ನನ್ನ ಸರಳ ಪಂಪಭಾರತದ ಮಾದರಿಯಲ್ಲಿಯೇ ೧೯೭೭ರಲ್ಲಿ ನನ್ನಿಂದಲೇ ಪರಿಷ್ಕೃತವಾಗಿದ್ದ ಆದಿಪುರಾಣವನ್ನು ಈಗ ಸರಳ ಆದಿಪುರಾಣವಾನ್ನಾಗಿ ರೂಪಿಸಿದ್ದೇನೆ"[೨] ಎನ್ನುವುದರ ಮೂಲಕ ತಮ್ಮ ಧ್ಯೇಯವನ್ನು ತಿಳಿಸಿತ್ತಾರೆ.

ಪ್ರೊ.ಎನ್.ಎಂ.ತಳವಾರ ಅವರು ಈ ಕೃತಿಗೆ ಮುನ್ನುಡಿ ಬರೆಯುತ್ತಾ"ಈ ಪ್ರಾಚೀನ ಕನ್ನಡ ಮಹಾಕಾವ್ಯ ಸುಲಭವಾಗಿ ಓದಿಕೊಳ್ಳಲಿ, ಆ ಮೂಲಕ ಸಹೃದಯರನ್ನು ತನ್ನತ್ತ ನಿರಾಯಾಸವಾಗಿ ಸೆಳೆದುಕೊಂಡು ತನ್ನ ಸಂಜೀವಿನಿ ಸ್ತನ್ಯವನ್ನು ಅವರಿಗೆ ಊಡಲಿ ಎಂಬ

---

೧. ಎಲ್.ಬಸವರಾಜು, **ಪಂಪನ ಸರಳ ಆದಿಪುರಾಣ**, ಅರಿಕೆ, ಅಭಿರುಚಿ ಪ್ರಕಾಶನ, ಮೈಸೂರು ಮೊದಲ ಮುದ್ರಣ, ೨೦೦೨

೨. – ಅದೇ –

ಉದ್ದೇಶದಿಂದ ಈ ಕೃತಿಯನ್ನು ರಚಿಸಲಾಗಿದೆ ಎಂದಿದ್ದಾರೆ. ಮೂಲದ ಛಂದಸ್ಸು, ಸಂಧಿ, ಸಮಾಸ ವಿನ್ಯಾಸಗಳಿಗೆ ಎಲ್ಲಿಯೂ ಚ್ಯುತಿಬಾರದಂತೆ ನೋಡಿಕೊಳ್ಳಲಾಗಿದೆ. ಕೃತಿಯು ವಾಚಕ ವರ್ಗವನ್ನು ದೃಷ್ಟಿಯಲ್ಲಿರಿಸಿಕೊಂಡು ರಚಿಸಿರುವ ಕಾರಣ– "ಅದನ್ನು ಎಲ್ಲೆಲ್ಲಿಗೆ ನಿಲ್ಲಿಸಿ ಗ್ರಹಿಕೆಗೆ ಒಳಪಡಿಸಿಕೊಂಡು,ಓದನ್ನು ಮುಂದುವರೆಸಬೇಕೆಂಬುದನ್ನು ನೋಡಿದೊಡನೆಯೇ ತಿಳಿಯುವಂತೆ ಆ ಮೂಲ ಪಠ್ಯವನ್ನೇ ಹೊಸದೊದು ಪದಪಾದ ವಿಭಜನೆಯಲ್ಲಿ ಜೋಡಿಸಲಾಗಿದೆ".[೩] ಇದರಿಂದ ಪ್ರಾಚೀನ ಕನ್ನಡ ಕಾವ್ಯ ಪರಿಷ್ಕರಣ ಇತಿಹಾಸದಲ್ಲಿಯೇ ಇದೊಂದು ಅಪರಿಚಿವಾದ ಹೊಸ ವಿರಾಮಚಿಹ್ನೆಯ ಬಲಕೆ ಎಂದಿದ್ದಾರೆ. ಮುಂದುವರಿದು, ಕಾವ್ಯದ ಮೂಲಬಂಧ ಭಂಗವಾಗಿದೆ ಎಂದು ಮಾತನಾಡಿದರೆ ಆ ಮಾತಿನಲ್ಲಿ ಜಡತೆಯೇ ಹೊರೆತು ಚಲನಶೀಲತೆಯಿಲ್ಲ ಎಂದಿದ್ದಾರೆ.ಅಲ್ಲದೆ ಇಂತಹ ಮಡಿವಂತಿಗೆಯನ್ನು ನಾವು ಅನುಸರಿಸುತ್ತಿರುವುದರಿಂದಲೇ ಪ್ರಪಂಚದ ಪ್ರಾಚೀನ ಮಹಾಕಾವ್ಯಗಳು ಇಂದಿಗೂ ತಿರಸ್ಕಾರಯೋಗ್ಯವಾಗಿವೆ ಎನ್ನುತ್ತಾ, ಪಂಪನ ಈ ಆದಿಪುರಾಣ ಜೈನೇತರ ವಿದ್ವಾಂಸರ ಅನಾದರಕ್ಕೆ ಅದರ ಧಾರ್ಮಿಕ ಅಂಶಗಳೇ ಕಾರಣ ಎಂದು ಸೂಚಿಸಿತ್ತಾರೆ. ಇದರಿಂದ ಕನ್ನಡ ಸಾಹಿತ್ಯಕ್ಕಾದ ನಷ್ಟವನ್ನು ನೆನೆದು ವಿಷಾದಿಸುತ್ತಾರೆ.ಅಲ್ಲದೆ ಆದಿಪುರಾಣ ಕೇವಲ ಜೈನಧಾರ್ಮಿಕ ಗ್ರಂಥವಲ್ಲ, ಅದು ಸಮಾಜದ ಹಿತಕ್ಕಾಗಿ ಹಾಗೂ ಸುಖಕ್ಕಾಗಿ ಒಂದು ಕುಟುಂಬದ,ಅದರ ಒಂದು ವ್ಯಕ್ತಿಯ ಸೌಹಾರ್ದಯುತ ಜವಬ್ದಾರಿಯ ಅಗತ್ಯತೆಯನ್ನು ಬಿಂಬಿಸುವ ದಿಗ್ದರ್ಶನ ಎಂದು ಹೇಳಿದ್ದಾರೆ. "ಹೀಗೆ ಆದಿಪುರಾಣದಲ್ಲಿ ಕಾವ್ಯದ ಜೀವಾಳವಾಗಬಲ್ಲ ಮೌಲ್ಯಧಾರಿತವಾದೊಂದು ಭವ್ಯಬಳಗದ ಚಿತ್ರಣವಲ್ಲದೆ– ಭಾರತೀಯ ಸಂಸ್ಕೃತಿಯನ್ನು ಕುರಿತಂತೆ ವಿಪುಲವಾದ ವಿವರಗಳು ದೊರೆಯುತ್ತವೆ".[೪] ಇಂತಹ ಉಪಯುಕ್ತ ಗ್ರಂಥವನ್ನು ತಮ್ಮ ಅಗಾಧವಾದ ಪಾಂಡಿತ್ಯದಿಂದ ಓದುಗರಿಗೆ ಸುಲಭಲಭ್ಯವಾಗುವಂತೆ ಕಾವ್ಯಾನಂದ ನೀಡಿರುವ ಎಲ್.ಬಸವರಾಜು ಅವರ ಈ ಕೃತಿಯನ್ನು ಜನರು ಪ್ರೀತಿಯಿಂದ ಬರಮಾಡಿಕೊಳ್ಳಬೇಕೆಂದು ಆಶಿಸುತ್ತಾರೆ.

ಎಲ್.ಬಸವರಾಜು ಅವರು ಈ ಹಿಂದೆ ತಮ್ಮ 'ಸರಳ ಪಂಪಭಾರತ' ಕೃತಿಯಲ್ಲಿ ಅನುಸರಿಸಿದ ಮಾದರಿಯನ್ನೇ ಪ್ರಸ್ತುತ ಕೃತಿಯಲ್ಲಿಯೂ ಅನುಸರಿಸಿದ್ದಾರೆ. ಅಂದರೆ ಪದ್ಯಭಾಗವನ್ನು ಸ್ವಲ್ಪ ಒಳಪಿಡಿಯಲ್ಲಿ ಕೊಟ್ಟು, ಅರ್ಥೈಸಲನುಕೂಲವಂತೆ–ಅದರನುಸಾರ (ಪಾದಪಾದವೆಂಬತೆ) – ವಿಂಗಡಿಸಿಕೊಟ್ಟಿದೆ. ಛಂದಸ್ಸಿನ ದೃಷ್ಟಿಯಿಂದ ಒಂದೊಂದೂ ಪದ್ಯದ ಪಾದ ಎಲ್ಲೆಲ್ಲಿ ನಿಲ್ಲುತ್ತದೆ ಎಂಬುದನ್ನು ಅಲ್ಲಲ್ಲಿ ಉಪರಿಯಾಗಿ ಕೊಟ್ಟಿರುವ ಯಾಸೆಯ ಗೀಟನಿಂದ ಸೂಚಿಸಲಾಗಿದೆ.ಎಲ್ಲಕ್ಕಿಂತ ದಪ್ಪದಪ್ಪವಾದ ಅಕ್ಷರದಲ್ಲಿ ಮುಂದುವರಿಯಲಿರುವ ಕಥಾಸಂದರ್ಭವನ್ನು ಪೂರ್ವಭಾವಿಯಾಗಿ ತಿಳಿಸುವ ಕ್ರಮವನ್ನು ಇರಿಸಿಕೊಳ್ಳಲಾಗಿದೆ. ಕೆಲವು ಅಗತ್ಯ ಮಾಹಿತಿವಿವರಕ್ಕಾಗಿ ಸಂದರ್ಭೋಚಿತವಾದ ಅಡಿಟಿಪ್ಪಣಿ ಸೂಚಿಸಿದೆ.ಅಲ್ಲಲ್ಲಿ ದುಂಡುಕಂಸಾಂತರ್ಗತದಲ್ಲಿ ಅರ್ಥಸ್ಪಷ್ಟತೆಗಾಗಿ ಹಿಂದಿನ ಪದದ ವಿವರಣೆಯನ್ನು ಕೊಟ್ಟಿದೆ. ಕೆಲವೆಡೆ ಪಾಠಾಂತರಗಳನ್ನು'(= )'ಚಿಹ್ನೆಯ ಮೂಲಕ ಸೂಚಿಸಲಾಗಿದೆ.ಇದೇ ಕ್ರಮವನ್ನು ಪ್ರಥಮಾಶ್ವಾಸದಿಂದ ಷೋಡಶಾಶ್ವಾಸದವರೆಗೂ ಅನುಸರಿಸಲಾಗಿದೆ. ಕೆಲವು ಉದಾಹೃತ ಪದ್ಯಗಳ ಮೂಲಕ ಕೃತಿಯಾಂತರ್ಯದ ರೂಪದರ್ಶನ ಮಾಡಬಹುದು–

---

೩. ಎನ್.ಎಂ.ತಳವಾರ್, **ಪಂಪನ ಸರಳ ಆದಿಪುರಾಣ**, ಮುನ್ನುಡಿ, ಅಭಿರುಚಿ ಪ್ರಕಾಶನ, ಮೈಸೂರು ಮೊದಲ ಮುದ್ರಣ, ೨೦೦೨

೪. ಎನ್.ಎಂ.ತಳವಾರ್, **ಪಂಪನ ಸರಳ ಆದಿಪುರಾಣ**, ಮುನ್ನುಡಿ, ಅಭಿರುಚಿ ಪ್ರಕಾಶನ, ಮೈಸೂರು ಮೊದಲ ಮುದ್ರಣ, ೨೦೦೨

ಟಿ.ವಿ.ವೆಂಕಟಾಚಲಶಾಸ್ತ್ರೀ ಅವರು ಸಂಪಾದಿಸಿದ ಆದಿಪುರಾಣದ ಮೂಲಪದ್ಯಭಾಗಗಳು:
(ಮುಂದೆಯೂ ಇದೇ ಕ್ರಮವನ್ನು ಅನುಸರಿಸಿದೆ)

ಉದಾ:೧

ಬಿಡದೆ ಪೊಗೆ ಸುತ್ತೆ ತೋಳಂ
ಸಡಿಲಿಸದಾ ಪ್ರಾಣವಲ್ಲಭರ್ ಪ್ರಾಣಮನಂ ।
ದೊಡೆಗಳೆದರೋಪರೊ
ಳೊಡೆಸಾಯಲ್ಪಡೆದರಿನ್ನವೇಂ ಸೈಪೊಳವೇ॥ (೩.೨೪)

ಎಲ್.ಬಸವರಾಜು ಅವರ ಪಂಪನ ಆದಿಪುರಾಣದ ಪದ್ಯ;

ಬಿಡದೆ
ಪೊಗೆ ಸುತ್ತೆ
ತೋಳಂ ಸಡಿಲಿಸದೆ–
ಆ ಪ್ರಾಣವಲ್ಲಭರ್ ಪ್ರಾಣಮನ್ ಅಂದು ಒಡಗಳೆದರ್–
ಓಪರ್ ಒಪರೊ ಳ್ ಒಡಸಾಯಲ್ ಪಡೆದರ್!
ಇನ್ನವುಂ ಸೈಪು ಒಳವೇ? ! (೩.೨೪)

ಉದಾ:೨

ವ ॥ ಅಂತು ಬಂದು ಪಾಂಡುಕವನದ ಪೂರ್ವೋತ್ತರಾಶಾಮುಖನಿವಾಸಿಯಾಗಿ
ಶತಯೋಜನವಿಷ್ಕಂಭದೊಳಂ ಪಂಚಷಡ್ಯೋಜನವಿಸ್ತಾರದೊಳಮಷ್ಟಯೋಜನೋ
ತ್ಸೇಧದೊಳಮಷ್ಟಮೀಚಂದ್ರಾಕೃತಿಯೊಳಷ್ಟಮಂಗಳ ಪರಿವೇಷ್ಟನದೊಳಂ
ನೆಱೆದು, [೭.೭೩ ವ]

ವ ॥ ಅಂತು ಬಂದು,ಪಾಂಡುಕವನದ ಪೂರ್ವೋತ್ತರಾಶಾ ಮುಖ ನಿವಾಸಿಯಾಗಿ
ಶತಯೋಜನ ವಿಷ್ಕಂಭದೊಳಂ,ಪಂಚಾಶದ್ ಯೋಜನ ವಿಸ್ತಾರದೊಳಂ,ಅಷ್ಟಯೋಜನ
ಉತ್ಸೇಧದೊಳಂ,ಅಷ್ಟಮೀ ಚಂದ್ರಾಕೃತಿಯೊಳಂ,ಅಷ್ಟ ಮಂಗಳ ಪರಿವೇಷ್ಟನದೊಳಂ
ನೆಱೆದು–

ಉದಾ:೩

ನೆಲೆಸುಗೆ ನಿನ್ನ ವಕ್ಷದೊಳೆ ನಿಶ್ಚಳಮೀ ಭಟಖಡ್ಗಮಂಡಲೋ
ತ್ಪಲವನವಿಭ್ರಮ ಭ್ರಮರಿಯಪ್ಪ ಮನೋಹರಿ ರಾಜ್ಯಲಕ್ಷ್ಮಿ ಭೂ ।
ವಲಯಮನಯ್ಯನಿತ್ತುದುಮನಾಂ ನಿನಗಿತ್ತೆನಿದೇವುದಣ್ಣ ನೀ
ನೊಲಿದ ಲತಾಂಗಿಗಂ ಧರೆಮಾಟಿಸಿದಂದು ನೆಗಟ್ಟೆ ಮಾಸದೇ ॥ (೧೪.೧೩೦)

ನೆಲೆಸುಗೆ ನಿನ್ನ ವಕ್ಷದೊಳ್ ನಿಶ್ಚಲಮ್
ಈ ಭಟ ಖಡ್ಗ ಮಂಡಲೋ ತ್ಪಲ ವನ
ವಿಭ್ರಮ ಭ್ರಮರಿಯಪ್ಪ ಚಲಾಚಲಾ ರಾಜ್ಯಲಕ್ಷ್ಮಿ!
ಭೂ ಲಲನೆಯನ್ ಅಯ್ಯನ್ ಇತ್ತುದುಮನ್
ಆಂ ನಿನಗಿತ್ತೆನ್!
ನಿ ನ್ನೊ(ನ್ನ ಒ)ಲಿದ ಲತಾಂಗಿಗಂ ಧರೆಗಮ್ ಆನ್ ಒಲಿದಂದು
ನೆಗೆಟ್ಟಿ ಮಾಸದೇ? (೧೪.೧೨೮)

ಗ್ರಂಥಾಂತ್ಯದಲ್ಲಿ ಸುಮಾರು ೬೦ ವಿಸ್ತಾರವಾದ ಅರ್ಥಕೋಶವನ್ನು ಅಕಾರಾದಿಯಾಗಿ ನೀಡಲಾಗಿದೆ.ಪದಗಳನ್ನು ನೀಡುವಾಗ ಅದು ಬಳಕೆಯಾಗಿರುವ ಆಶ್ವಾಸ ಹಾಗೂ ಪದ್ಯಸಂಖ್ಯೆಯನ್ನು ಉಲ್ಲೇಖಿಸಲಾಗಿದೆ.ನೋಡಿದೊಡನೆಯೇ ಓದುಗರು ಇಂತಹ ಪದ ಇಲ್ಲಿಯೇ ಬಳಕೆಯಾಗಿದೆ ಎಂಬುದನ್ನು ಮನದಟ್ಟು ಮಾಡಿಕೊಳ್ಳಬಹುದು.

ಈ ಕೃತಿಗೆ ಬೆನ್ನುಡಿಯಾಗಿ ಬರೆದಿರುವ ಪ್ರೊ.ಅರವಿಂದ ಮಾಲಗತ್ತಿ ಅವರು ಎಲ್.ಬಸವರಾಜು ಅವರ ಕಾರ್ಯವೈಖರಿಯನ್ನು ಕುರಿತು–"ಎಲ್.ಬಸವರಾಜು ಅವರು ಸಂಶೋಧಕರಾಗಿ, ಗ್ರಂಥಸಂಪಾದಕರಾಗಿ, ಅನುವಾದಕರಾಗಿ, ಕವಿಯಾಗಿ, ಕನ್ನಡನಡಿಗೆ ಪರಿಚಿತರು.ಹಳೆಗನ್ನಡ ಮತ್ತು ನಡುಗನ್ನಡ ಸಾಹಿತ್ಯಕ್ಕೆ ತಮ್ಮನ್ನು ತಾವು ಸಮರ್ಪಿಸಿಕೊಂಡ ಹಿರಿಯವಿದ್ವಾಂಸರಲ್ಲಿ ಒಬ್ಬರು.ಅವರು ಪಕ್ಕಕಾ ವಾಸ್ತವತಾವಾದಿ ನೆಲೆಗಟ್ಟಿನಿಂದ ಚಿಂತಿಸುವವರಾಗಿದ್ದು,ಓದುಗರ ನಾಡಿಯನ್ನು ಪರೀಕ್ಷಿಸುವಲ್ಲಿ ನುರಿತ ವೈದ್ಯರಂತೆ ಕಾಣುತ್ತಾರೆ.ಒಂದು ಕೃತಿಯ ಕುರಿತು ಇರಬೇಕಾದ ಅಧ್ಯಯನ ಕಾಳಜಿಯ ವಿಭಿನ್ನ ನೆಲೆಗಳನ್ನು ಕಂಡುಕೊಳ್ಳುತ್ತ,ಓದುಗ ವರ್ಗದ ಸಾಮರ್ಥ್ಯ ಹಾಗೂ ಅಭಿರುಚಿಯನ್ನರಿತು ಒಂದೇ ಕೃತಿಯನ್ನು ವಿಭಿನ್ನಸ್ವರುಪಗಳಲ್ಲಿ ಕಟ್ಟಿಕೊಡುವ ಅವರ ರೀತಿ ನಮ್ಮ ಶ್ರದ್ಧೆಯನ್ನು ನಾವೇ ಪ್ರಶ್ನಿಸಿಕೊಳ್ಳುವಂತೆ ಮಾಡುತ್ತದೆ.ಗ್ರಂಥಸಂಪಾದನ ಕ್ಷೇತ್ರದಲ್ಲಿಯ ಅವರ ಕಾರ್ಯವೈಖರಿ ಒಂದು ಮಾದರಿ.ಅದು ಅವರದ್ದೇ ಛಾಪು.ಪರಂಪರೆಯನ್ನು ಬಿಡದೆ ಗೌರವಿಸುತ್ತ,ವಿಮರ್ಶಿಸುತ್ತ ಹೊಸತನವನ್ನು ಅಳವಡಿಸಿ ಗಂಥಸಂಪಾದನೆಯ ವಿವಿಧ ಮಜಲುಗಲನ್ನೂ,ಮಾದರಿಗಳನ್ನು ಕಂಡುಕೊಂಡವರು.ಗ್ರಂಥಸಂಪಾದನಾ ಶಾಸ್ತ್ರವನ್ನೂ ಕೂಡ ವೈಚಾರಿಕವಾಗಿ ಹೇಗೆ ಸೃಜನಶೀಲ ಮಾದರಿಯನ್ನಾಗಿ ಮಾಡಿಕೊಳ್ಳಬಹುದು ಎನ್ನುವುದು ಅವರಿಗೆ ಹಸ್ತಗತವಾಗಿದೆ.ಪಾಂಡಿತ್ಯಕ್ಕೆ ವರ್ಗಭೇದವಿಲ್ಲ ಎಂಬುದನ್ನು ಅವರ ವಿಚಾರಗಳು ಪಡಿಮೂಡಿಸಿದ ಬಹರಗಳು ಸಾಬೀತುಗೊಳಿಸುತ್ತವೆ"ಎಂದಿದ್ದಾರೆ.

ಧಾರ್ಮಿಕ ಸೋಂಕಿನಿಂದ ಉಪೇಕ್ಷಿತವಾಗಿದ್ದ ಪಂಪನ 'ಆದಿಪುರಾಣ' ಎಲ್.ಬಸವರಾಜು ಅವರಿಂದ ಸರಳಗೊಂಡು, ಜನಸಾಮಾನ್ಯರೂ ಓದುವಂತೆ ಆಗಿದೆ. ಅಲ್ಲದೆ ಪ್ರತಿಯೊಬ್ಬರೂ ಆದಿಪುರಾಣವನ್ನು ಪ್ರವೇಶಿಸುವಂತೆ ಮಾಡಿರುವ ಈ ಕೃತಿ ದಾರಿದೀಪವಾಗಿದೆ. ಇದರಿಂದ ಜೈನಪಾರಿಭಾಷಿಕಗಳು ಜನರಿಗೆ ಸುಲಭವಾಗಿ ತಿಳಿವುದಲ್ಲದೆ, ಪಂಪನ ಕಾವ್ಯಧರ್ಮ ಎಲ್ಲರಿಗೂ ಮನವರಿಕೆಯಾಗುತ್ತದೆ.

ಎಲ್.ಬಸವರಾಜು ಅವರ ಈ ಕೃತಿ ಹೊರಬರುವುದಕ್ಕೂ ಮುನ್ನವೇ ಪಂಪನ ಆದಿಪುರಾಣ ಕೃತಿಯ ಬಗ್ಗೆ ಹಲವಾರು ವಿಮರ್ಶಾಲೇಖನ, ಸಂಶೋಧನಾಸಾರಸಂಗ್ರಹಗಳು ಹೊರಬಂದವು. ಆದರೆ ಇವು ಮೂಲವನ್ನೇ ನಿರ್ದೇಶಿಸುವ ಪ್ರಯತ್ನಗಳೇ ಹೊರೆತು ಎಲ್ಲಿಯೂ ಸರಳಗೊಳಿಸುವ ಪ್ರಯತ್ನಗಳು ಕಂಡುಬಂದಿಲ್ಲ. ವಾಚಕವರ್ಗವನ್ನು ಮುಖ್ಯವಾಗಿಟ್ಟುಕೊಂಡು, ಪಂಪನ 'ಆದಿಪುರಾಣ' ಜನಸಾಮಾನ್ಯರು ಓದಲು ಸುಲಭವಾಗಬೇಕೆಂಬ ಹೆಬ್ಬಯಕೆಯಿಂದ ರಚಿತವಾದ ಎಲ್.ಬಸವರಾಜು ಅವರ 'ಪಂಪನ ಸರಳ ಆದಿಪುರಾಣ' ಅವರ ಜನಪರಕಾಳಜಿಯ ದ್ಯೋತಕವಾಗಿದೆ ಎಂಬುದು ನಿಸ್ಸಂದೇಹದ ಸಂಗತಿ.

## ೪. ಪಂಪನ ಆದಿಪುರಾಣ ಕಥಾಮೃತ

ಪಂಪನ ಆದಿಪುರಾಣವನ್ನು ಸರಳಾನುವಾದ ಮಾಡಿದ ತರುವಾಯದಲ್ಲಿ ಎಲ್.ಬಸವರಾಜು ಅವರು 'ಆದಿಪುರಾಣ'ವನ್ನು ಸರಳಗದ್ಯದ ಮೂಲಕ ಛಾಯಾನುವಾದ ಮಾಡುವ ಕಾರ್ಯಕ್ಕೆ ಅಡಿಯಿಟ್ಟರು. ಪಂಪನ 'ಆದಿಪುರಾಣ'ವನ್ನು ಓದುಗರು ಸುಲಭವಾಗಿ ಓದಿದರಷ್ಟೆ ಸಾಲದು. ಅದರ ಕಥಾಸಾರವನ್ನು ಪ್ರತಿಪದ್ಯದ ಹಿನ್ನಲೆಯಲ್ಲಿ ತಿಳಿಯಬೇಕೆಂಬ ಹಂಬಲದಿಂದ ಎಲ್.ಬಸವರಾಜು ಅವರು 'ಪಂಪನ ಆದಿಪುರಾಣ ಕಥಾಮೃತ'ವನ್ನು ರಚಿಸಿದ್ದಾರೆ.

ಪಂಪನ 'ವಿಕ್ರಮಾರ್ಜುನ ವಿಜಯಂ' ಲೌಕಿಕಕಾವ್ಯ. ಅದರಲ್ಲಿ ಹೆಚ್ಚಾಗಿ ಸಮಸ್ಯೆಗಳಿರುವುದಿಲ್ಲ.ಆದರೆ ಪಂಪನ 'ಆದಿಪುರಾಣಂ' ಧಾರ್ಮಿಕಕಾವ್ಯ. ಇಲ್ಲಿ ಧಾರ್ಮಿಕ ಪಾರಿಭಾಷಿಕಗಳು ಹೆಚ್ಚಾಗಿದ್ದು,ಅವುಗಳನ್ನು ಸರಳಗದ್ಯದಲ್ಲಿ ತಿಳಿಸುವುದು ಅಷ್ಟು ಸುಲಭವಲ್ಲ.ಅದಕ್ಕಾಗಿ ಜೈನಧರ್ಮ ಪಾರಿಭಾಷಿಕತತ್ತ್ವಗಳ ಅಧ್ಯಯನ ಅಗತ್ಯ. ಆದರೆ ಇಂತಹ ವಿದ್ವತ್ಪೂರ್ಣಕಾರ್ಯ ಎಲ್.ಬಸವರಾಜು ಅವರಿಂದ ನೆರವೇರಿದೆ ಎಂಬುದು ಸಂತೋಷದ ಸಂಗತಿ. ಲೌಕಿಕಕಾವ್ಯವಾದ 'ವಿಕ್ರಮಾರ್ಜುನವಿಜಯ'ದ ಕಾವ್ಯಾಮೃತವನ್ನು ಉಣಬಡಿಸಿದ ತರುವಾಯ ಎಲ್.ಬಸವರಾಜು ಅವರು ಪಂಒನ ಆಗಮಿಕಕಾವ್ಯವಾದ ಆದಿಪುರಾಣದ ಕಥಾಮೃತವನ್ನು ಜನಸಾಮಾನ್ಯರೂ ಆಸ್ವಾದಿಸುವಂತೆ ಮಾಡಿದ್ದಾರೆ.

ಎಲ್.ಬಸವರಾಜು ಅವರು ಆದಿಪುರಾಣದ ಪದಶಃ ಸರಳಗದ್ಯ ರೂಪದ ಛಾಯಾನುವಾದ ಮಾಡುವ ಸಂದರ್ಭದಲ್ಲಿ ಕೆಲವೆಡೆ ಧಾರ್ಮಿಕಭಾಗಗಳು ಸುಲಭವಾಗಿ ಸಗ್ಗದೆ ಕ್ಲೇಶಕಾರಕವಾಗಿದ್ದು,ಅದರ ನಿರೂಪಣೆ ಅಭೇದ್ಯವೂ,ತೀರ ಗಹನವೂ ಆಗಿರುವುದರಿಂದ ಅದನ್ನು ಮೂಲದಲ್ಲಿರುವಂತೆ ಯಥಾವತ್ತಾಗಿ ಕೊಡಲಾಗಿದೆ ಎಂದು ಕೃತಿತ ಆರಂಭದ ಅರಿಕೆಯಲ್ಲಿ ನಿವೇದಿಸುತ್ತಾರೆ.ಆ ಕೆಲವು ಭಾಗಗಳು ಈ ಕೆಳಕಂಡತಿವೆ–

೧) ಮಹಾಬಲನ ವರ್ಷವರ್ಧಂತಿಯ ದಿನ ಅವನ ಆಸ್ಥಾನದಲ್ಲಿ ನಡೆದ ಧರ್ಮಜಿಜ್ಞಾಸೆ (೨,೫ ವ–೧೧)

೨) ಪ್ರಥಮ ತೀರ್ಥಂಕರ ವೃಷಭನಾಥನ ಕೇವಲಜ್ಞಾನೋತ್ಪತ್ತಿಯ ಪರಿಭಾಷೆ ಮತ್ತು ಪ್ರಕ್ರಿಯೆ (೧೦.೧೩ವ–೧೫)

೩) ಭಗವಂತನ ಸಮವಸರಣ ಮಂಟಪವರ್ಣನೆ ೧೦.೫೨ ವಚನದಲ್ಲಿ ಸಂಕ್ಷಿಪ್ತವಾಗಿ ದೊರೆಯುವುದರಿಂದ ಅದನ್ನು ಕುರಿತಂತೆ ವಿಸ್ತಾರ ವರ್ಣನೆಯ ಭಾಗ (೧೦.೨೨ವ.೪೫)ವನ್ನು ಕೈಬಿಡಲಾಗಿದೆ.

೪) ಆಶ್ವಾಸ ೧೩ ರಲ್ಲಿ ಭರತನ ದಿಗ್ವಿಜಯ ಸಂದರ್ಭದಲ್ಲಿ ಆತನು ಹಿಮಾಲಯ ಪರ್ವತದ ಎಡಬಲ ಮತ್ತು ಆಚೆಗೆ ಮಾಡಿದ 'ಉತ್ತರಭಾರತವಿಜಯ'ದ ಕೆಲವು ಭೌಗೋಳಿಕವಿವರಗಳು ಸಮಂಜಸವಾಗಿ ಮನದಟ್ಟಾಗುವುದಿಲ್ಲ,ಮತ್ತು ಅದೇ ಆಶ್ವಾಸದಲ್ಲಿ ಬರುವ ಆಂಧ್ರ-ಕರ್ನಾಟಕ-ವರಾಟ-ವನಾಟ-ಲಾಟ ಪ್ರಾಂತೀಯ ಸೇನಾತುಕಡಿಗಳ ವೇಷ-ಭೂಷಣ-ಸಜ್ಜಿನ ವರ್ಣನಾ ವೈಖರಿ (೧೩.೪೫ವ) ಯನ್ನು ಸರಳಗೊಳಿಸುವುದಾಗದೆ ಯಥಾವತ್ತಾಗಿ ಕೊಡಲಾಗಿದೆ.

೫)ವೃಷಭತೀರ್ಥಂಕರಸ್ವಾಮಿಯ ಪರಿನಿರ್ವಾಣ ಸಂಧರ್ಭದ ನಿರೂಪಣೆ ತೀರ ಗಹನವೂ ಅಭೇದ್ಯವೂ ಆಗಿರುವುದು ಸಹಜವೆ,ಆದ್ದರಿಂದ ಆ ಭಾಗವನ್ನು ಸರಳಗೊಲಿಸಲಾಗದೆ ಯಥಾವತ್ತಾಗಿ ಕೊಡಲಾಗಿದೆ.(೧೬.೨೩ವ-೨೪)

-ಮಿಕ್ಕಂತೆ ಉಳಿದ ಭಾಗಗಳನ್ನು ಮೂಲವಾಕ್ಯವಿನ್ಯಾಸವನ್ನು ಅನುಸರಿಸಿ ಅದರ ಅರ್ಥ-ಭಾವ-ಧ್ವನಿಗೆ ಭಾದೆಯಾಗದಂತೆ ಸರಳಗದ್ಯಾನುವಾದದಲ್ಲಿ ಮಾಡಿಕೊಡಲಾಗಿದೆ. ಇದರಿಂದ ಪಂಪನ ಕಾವ್ಯದ ಸೊಗಸು, ಜೈನಧರ್ಮದ ಘನತೆ ಜನಸಾಮಾನ್ಯರಿಗೆ ಮನವರಿಕೆಯಾಗುವಂತೆ ಮಾಡಿದ್ದಾರೆ. ಜೊತೆಗೆ ಪಂಪನ ಕೆಲವು ವೈಯಕ್ತಿಕವಿಚಾರಗಳನ್ನು ಸಂಕ್ಷಿಪ್ತವಾಗಿ ಸಿದ್ಧಪಡಿಸಿಕೊಟ್ಟಿರುವುದು ಸಾಹಿತ್ಯಾಸಕ್ತರಿಗೆ ಅಗತ್ಯ ಮಾಹಿತಿಯಾಗಿದೆ.

ಪಂಪನ ಜೀವನದೃಷ್ಟಿಯ ಬಗ್ಗೆ ಬಳಕು ಚೆಲ್ಲುತ್ತಾ,ಎಲ್.ಬಸವರಾಜು ಅವರು ಆತನ ಕೆಲವು ಸ್ಮರಣಾರ್ಥ ಸ್ಥಳಗಳನ್ನು ಅಭಿವೃದ್ಧಿಪಡಿಸಬೇಕೆಂದು ಕರ್ನಾಟಕ-ಆಂಧ್ರಸರ್ಕಾರಗಳಿಗೆ ಸೂಚಿಸುತ್ತಾರೆ.ಅಂದರೆ ಪಂಪನ ದಾನದತ್ತಿ ಅಗ್ರಹಾರವಾದ ಧರ್ಮಪುರ, ಕವಿತಾಗುರ್ಣಾಣವ ಕೆರೆ ಹಾಗೂ ಮದನವಿಲಾಸ ಉದ್ಯಾನವನ್ನು ಕರ್ನಾಟಕೊಂಧ್ರೋಭಯ ಸರ್ಕಾರಗಳು ಅಭಿವೃದ್ಧಿಪಡಿಸಿ,ಇವುಗಳು ಧಾರ್ಮಿಕ ಹಾಗೂ ಸಾಂಸ್ಕೃತಿಕ ಕೇಂದ್ರಗಳಾಗಬೇಕೆಂದು ಬಯಸುತ್ತಾರೆ.ಇದು ಪ್ರತಿಯೊಬ್ಬ ಸಾಹಿತ್ಯಾಸಕ್ತನ ಮನದಾಳದ ಹಂಬಲ ಎಂಬುದನ್ನು ಮರೆಯುವಂತಿಲ್ಲ.

ಪಂಪನು ತನ್ನ ಕಾವ್ಯಭಾಗಗಳಲ್ಲಿ ಲುಪ್ತವಾದ ಅಲ್ಲಲ್ಲಿ ನೆನೆದಿರುವ ಕೆಲವು ತಾಣಗಳನ್ನು ಆಧಾರವಾಗಿಟ್ಟುಕೊಂಡು ಅವನ ಕಾವ್ಯದ ರೂಪುರೇಷೆಯನ್ನು ಕಟ್ಟಿಕೊಡುತ್ತಾರೆ. ಇವುಗಳ ಮೂಲಕ ಎಲ್ಲೆಲ್ಲಿ ನೆಲೆಯೂರಿದನು ಎಂಬುದನ್ನು ಹಾಗೂ ಆತನ ಪದ್ಯಗಳಿಂದಲೇ ಪಂಪನ ವಂಶಾವಳಿಯ ಚಿತ್ರಣವನ್ನು ತಕ್ಕ ಉದಾಹರಣೆಗಳ ಮೂಲಕ ಬಿಚ್ಚಿಡುತ್ತಾರೆ.ಪಂಪನ ಜೀವನ ವಿಚಾರವಲ್ಲದೆ ಆತನ ಕಾವ್ಯಗಳ ಧ್ಯೇಯಗಳನ್ನು ದರ್ಶಿಸುವ ಕಾರ್ಯ ಎಲ್.ಬಸವರಾಜು ಅವರಿಂದ ನೆರವೇರಿದೆ.ಪಂಪನ ಕಾವ್ಯಗಳು ಕೇವಲ ಪ್ರಾಂತೀಯಭಾಷೆಗಳಿಗಷ್ಟೆ ಮಿತಿಗೊಳ್ಳದೆ ಅದು ದೇಶದೆಲ್ಲೆಡೆ ವ್ಯಾಪಿಸುವ ವೈಶಾಲ್ಯತೆಯನ್ನು ಹೊಂದಿದೆ ಎನ್ನುತ್ತಾರೆ. ಅಂದರೆ ಎಲ್.ಬಸವರಾಜು ಅವರು ಹೇಳುವಂತೆ- "ಪಂಪನು ಕನ್ನಡದಲ್ಲಿ ಸಮಸ್ತಭಾರತವನ್ನು ಬರೆಯುವವರೆಗೆ-ಸಂಸ್ಕೃತ-ಪ್ರಾಕೃತ ಭಾಷೆಗಳಲ್ಲಿ ಬಿಟ್ಟರೆ- 'ಮಹಾಭಾರತ'ದಂತಹ ಒಂದು ಮಹಾಕಾವ್ಯ ಅದರ ಘನತೆಗೆ ತಕ್ಕಂತೆ ಮಿಕ್ಕ ಯಾವಪ್ರಾಂತೀಯ ಭಾಷೆಯಲ್ಲಿಯೂ ರಚನೆಗೊಂಡಿಲ್ಲವೆಂಬುದನ್ನು ಇಲ್ಲಿ ಗಮನಿಸಬೇಕು. ಈ ಮಹಿಮೆ 'ಪಂಪಭಾರತ' ತನ್ನದೇ ಆದ

ವೈಶಿಷ್ಟತೆಯಿಂದಾಗಿ ಭಾರತೀಯ ಅನ್ಯಭಾಷೆಗಳಿಗೆ ಈಗಲೂ ತರ್ಜುಮೆಗೊಂಡರೆ, ಪಂಪ ಮಹಾಕವಿ ನಮಗೆ ಮಾತ್ರವಲ್ಲ, ಎಲ್ಲರಿಗೂ 'ನಮ್ಮವನೇ' ಎನಿಸುವಲ್ಲಿ ಸಂಶಯವಿಲ್ಲ"[೧] ಹಾಗೆಯೇ ಇಂತಹ ಮಹತ್ತು ಪಂಪನ ಏಕಮೇವಕೃತಿಗೆ ಮಾತ್ರವಲ್ಲ ಆದಿಪುರಾಣಕ್ಕೂ ಅನ್ವಯವಾಗುತ್ತದೆ ಎಂಬುವುದನ್ನುತಿಳಿಸುತ್ತಾ-"ನಶ್ವರವಾದ ಐಹಿಕ ಭೋಗ ಭಾಗ್ಯದ ಸುಖವು ಪುರಸ್ಕಾರಾರ್ಹವಾದುದಲ್ಲವೆಂಬುದನ್ನು ಗುಂಭವಾಗಿ ಧ್ವನಿಸಲು ಪಂಪನು 'ಸಮಸ್ತ ಭಾರತ'ವನ್ನು ಬರೆದರೆ, ಪರ್ಯಾಯವಾಗಿ ಶಾಶ್ವತವಾದ ಆತ್ಮೋದ್ಧಾರದ ಸುಖವೇ ಪುರಸ್ಕಾರಾರ್ಹವಾದುದೆಂಬುದನ್ನು ಉದ್ಘೋಷಿಸಲು ಆದಿಪುರಾಣವನ್ನು ಬರೆದನು"[೨] ಎಂದಿದ್ದಾರೆ.

ಪಂಪನ ಎರಡೂ ಕಾವ್ಯಗಳು ಭಿನ್ನದೃಷ್ಟಿಗಳನ್ನಾಧರಿಸಿ ರಚಿತವಾದರೂ ಎರಡೂ,ಮಾನವನಿಗೆ ಬಹುಪಯೋಗಿ ಎಂದು ಎಲ್.ಬಸವರಾಜು ಅವರು ತಿಳಿಸುತ್ತಾರೆ. ಅಂದರೆ ಆದಿಪುರಾಣ ಧಾರ್ಮಿಕಗ್ರಂತವಾದರೂ ಅದರಲ್ಲಿ ಪಂಒನ ಗುರುಭಕ್ತಿ, ಶ್ರದ್ಧೆ ಹಾಗೂ ಶುಭಾಕಾಂಕ್ಷೆಯೊಂದಿಗೆ,ಮೋಕ್ಷದ ಮಾರ್ಗದರ್ಶವಾಗಿದೆ. ಹಾಗೆಯೇ ಪಂಪನ ಮತ್ತೊಂದು ಮಹಾಕಾವ್ಯ 'ವಿಕ್ರಮಾರ್ಜುನ ವಿಜಯ' ದಲ್ಲಿ ಆಶ್ರಯದಾತನ ಗುಣೋವರ್ಣನೆಗಳಿದ್ದರೂ ಕೃತಯು ೧೦ನೇ ಶತಮಾನದ ಭಾರತದ ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಪರಿಸ್ಥಿತಿಯ ಪಾರ್ಶ್ವನೋಟವನ್ನು ಒದಗಿಸುತ್ತದೆ. ಆ ಮೂಲಕ ಪಂಪ ಕನ್ನಡದ ವಿನೂತನ ಕಾವ್ಯಪ್ರವರ್ತನೆಗೆ ಕಾರಣಕರ್ತನಾದನು ಎಂದಿದ್ದಾರೆ.

ಎಲ್.ಬಸವರಾಜು ಅವರು ಪಂಪನ ಮತವಿಚಾರವಾಗಿ ಚರ್ಚಿಸುತ್ತಾ, ಈತ ಸ್ವತಃ ಜೈನಬ್ರಾಹ್ಮಣನಾದರೂ ವರ್ಣವ್ಯವಸ್ಥೆ ಹಾಗೂ ರಾಜರ ರಾಜಕೀಯ ವ್ಯವಸ್ಥೆಯ ಬಗ್ಗೆ ಅಸಮಧಾನ ಹೊಂದಿದ್ದನು ಎಂದು ತಿಳಿಸುವುದರ ಮೂಲಕ ಆತನ ವ್ಯಕ್ತಿತ್ವಕ್ಕೆ ಹೊಸ ಮೆರಗನ್ನು ನೀಡುತ್ತಾರೆ.ಕವಿಯೂ,ಕಲಿಯೂ, ಉದಾರ ವ್ಯಕ್ತಿತ್ವದವನೂ ಆಗಿದ್ದ ಪಂಪನ 'ಆದಿಪುರಾಣ'ವನ್ನು ಸಾವಿರವರ್ಷಗಳೀಚೆನ ಸಾಹಿತ್ಯಾಸಕ್ತರು ಓದಲು ಅನುಕೂಲವಾಗುವಂತೆ, ಚಂಪೂಕಾವ್ಯಗಳ ಸರಳಗದ್ಯ - ಛಾಯಾನುವಾದ ಮಾಡಿರುವುದಾಗಿ ಹೇಳಿ, ತಮ್ಮ ಕೃತಿರಚನೆಯ ಸಾರ್ಥಕ್ಯವನ್ನು ಸಮರ್ಥಿಸುತ್ತಾರೆ. ಇದು ಕೇವಲ ಸಮರ್ಥನೆ ಮಾತ್ರವಲ್ಲ, ಪ್ರಸ್ತುತ ಸಾಹಿತ್ಯಾಸಕ್ತರ ಹಾಗೂ ಓದುಗರ ಅನಿವಾರ್ಯವೂ ಹೌದು ಎಂಬುದನ್ನು ಮರೆಯಬಾರದು.

ಎಲ್.ಬಸವರಾಜು ಅವರು ಪ್ರಸ್ತುತ ಕೃತಿಯ ರಚನಾವಿನಯಸದಲ್ಲಿ ತಮ್ಮ ಹಿಂದಿನ 'ಪಂಪನ ಸಮಸ್ತ ಭಾರತ ಕಥಾಮೃತ' ಶೈಲಿಯನ್ನೇ ಅನುಸರಿಸಿದ್ದಾರೆ. ಅಂದರೆ ಮೂಲವನ್ನು ಚಾಚುತಪ್ಪದೆ (ಕೆಲವು ಅಭೇದ್ಯಭಾಗವನ್ನು ಹೊರತಾಗಿ, ಹಿಂದೆ ಹೇಳಿದಂತೆ) ಎಲ್ಲೆಡೆ ಅನುಕ್ರಮವಾಗಿ ಅನುಸರಿಸಲಾಗಿದೆ. ಓದುಗರಿಗೆ ಓದಲು ಸುಲಭವಾಗುವಂತೆ ಪದ್ಯಸಾರದ ಅರ್ಥವನ್ನು ಉಪಶೀರ್ಷಿಕೆಗಳಾಗಿ ಪದ್ಯಾದಿಯಲ್ಲಿ ನೀಡಲಾಗಿದೆ. ಪ್ರತಿ ಪದ್ಯದ

--------------------

೧. ಎಲ್.ಬಸವರಾಜು, 'ಪಂಪನ ಆದಿಪುರಾಣ ಕಥಾಮೃತ' ಅರಿಕೆ, ಗೀತಾ ಬುಕ್ ಹೌಸ್, ಮೈಸೂರು, ಪ್ರಥಮ ಪ್ರಕಾಶನ ೨೦೦೩ ಪುಟ.೭

೨. ಅದೇ ಪುಟ.೭

ತಾತ್ಪರ್ಯದ ತರುವಾಯ ಪದ್ಯಸಂಖ್ಯೆಯನ್ನು ಚಾಚುತಪ್ಪದೆ ನೀಡಲಾಗಿದೆ.ಗದ್ಯ ಬಂದ ಸಂದರ್ಭದಲ್ಲಿ ಆ ಹಿಂದಿನ ಪದ್ಯಸಂಖ್ಯೆ ನೀಡಿ ಅದರ 'ವಚನ'ವೆಂದು ತಿಳಿಸಲಾಗಿದೆ. ಛಂದೋಬದ್ಧವಾದ ಮೂಲಕೃತಿಯ ಅರ್ಥ ಜನಸಾಮಾನ್ಯರಿಗೆ ಸ್ಪಷ್ಟವಾಗುವಂತೆ ದುಂಡುಕಂಸಾಂತರ್ಗತದಲ್ಲಿ'(= )'ಚಿಹ್ನೆಯ ಮೂಲಕ ಸಂಕೇತಿಸಲಾಗಿದೆ. ಅಲ್ಲದೆ ಕೆಲವೆಡೆ ಧಾರ್ಮಿಕ ಪಾರಿಭಾಷಿಕಗಳನ್ನು ಪ್ರತ್ಯೇಕವಾಗಿ ಪಟ್ಟಿಮಾಡುವುದರೊಂದಿಗೆ 'ವಿಶೇಷ' ಎಂಬ ಶೀರ್ಷಿಕೆಯಡಿ ಚಿಕ್ಕಟಿಪ್ಪಣಿ ಇದೆ.ಕೃತಿಯ ಕೆಲವು ಭಾಗಗಳ ಮೂಲಕ ಅದರ ರಚನಾವಿನ್ಯಾಸವನ್ನು ಮನದಟ್ಟು ಮಾಡಿಕೊಳ್ಳಬಹುದು-

ಟಿ.ವಿ.ವೆಂಕಟಾಚಲಶಾಸ್ತ್ರೀ ಅವರು ಸಂಪಾದನೆಯ ಪರಿಷ್ಕೃತ ಆವೃತ್ತಿಯ 'ಆದಿಪುರಾಣ'ದ ಪದ್ಯಗಳು:

(ಮುಂದಿನ ಭಾಗಗಳು ಇದೇ ಅನುಕ್ರಮವನ್ನು ಅನುಸರಿಸಿದೆ)



ಉದಾ:೧

ಮದನನ ಕೈದುವೆಲ್ಲಿದನನಂಗನ ಕೈಪೊಡೆಯೆಲ್ಲಿದಂ ವಿಳಾ
ಸದ ಕಣಿಯೆಲ್ಲಿದಂ ಚದುರ ಪುಟ್ಟಿದನೆಲ್ಲಿದನೆಲ್ಲಿದಂ ವಿನೋ ।
ದದ ಮೊದಲೆಲ್ಲಿದಂ ಸೊಬಗಿನಾಗರಮೆಲ್ಲಿದನಿಚ್ಚೆಯಾಣ್ಮನೆ
ಲ್ಲಿದನೆರ್ದೆಯಾಣ್ಮ ನೆನ್ನರಸನೆಲ್ಲಿದನೋ ಲಲಿತಾಂಗವಲ್ಲಭಂ ॥ (೩.೧೫)

ಎಲ್.ಬಸವರಾಜು ಅವರ ಕಥಾಮೃತದಲ್ಲಿ:

'ಆ ಮದನನ ಕೈದು ಎಲ್ಲಿ ಹೋದ, ಅನಂಗನ ಕೈಗನ್ನಡಿ ಎಲ್ಲಿ ಹೋದ, ವಿಲಾಸದ ಗಣಿ ಎಲ್ಲಿ ಹೋದ, ಆ ಚದುರನು ಹೋಗಿ ಎಲ್ಲಿ ಹುಟ್ಟಿದನೋ- ವಿನೋದದ ನಿಧಿ ಎಲ್ಲಿ ಹೋದ, ಸೊಬಗಿನ ನೆಲೆ ಎಲ್ಲಿ ಹೋದ, ನನ್ನ ಇಚ್ಛೆಯ ಆಣ್ಮ-ನನ್ನೆದೆಯ ರಕ್ಷಕ-ನನ್ನರಸ ಎಲ್ಲಿ ಹೋದನೋ?-ಆ ಲಲಿತಾಂಗ ವಲ್ಲಭ!' (೩.೧೪)



ಉದಾ:೨

ಎನಿಸಿದ ನೀಳಾಂಜನೆ ಕ
ರ್ಬಿನ ಬಿಲ್ಲಿಂ ಮಸೆದ ಮದನನಲರ್ಗಣೆ ಬರ್ದುಕಿ ।
ತ್ತೆನಿಸುತ್ತೊಳ ಪೊಕ್ಕಳ್ ಭೋಂ
ಕೆನೆ ನಿಖಿಳಜನಾಂತರಂಗಮಂ ರಂಗಮುಮಂ ॥ (೯.೧೯)

ಎನಿಸಿದ ನೀಲಾಂಜನೆ ಕಬ್ಬಿನ ಬಿಲ್ಲಿಂದ ಎಸೆದ ಮನ್ಮಥನ ಹೂ ಬಾಣ
ಜೀವ ಪಡೆಯಿತೆನಿಸುತ್ತ (ಮಿಂಚಿ) ಹೊಕ್ಕಳು ಥಟ್ಟನೆ ನೆರೆದ ಸಭಿಕರೆಲ್ಲರ
ಅಂತರಂಗವನ್ನು ರಂಗಮಂಟಪವನ್ನು (೯.೧೯)

ಉದಾ:೩

ವ ॥ ತಾನುಮಾದಿಭಟ್ಟಾರಕರ ಪದಪಯೋಜಂಗಳ್ಗೆಱಗಿ ನಿಜವಿಮಾನ
ಮನಾ ಮಾನವರೆನೇಱಿಸಿಕೊಂಡು ಪೋಗಿ ರಜತಾಚಲಮನೆಯ್ದಿ, (೯.೧೧೨)

ತಾನೂ ಆದಿಭಟ್ಟಾರಕರ ಪಾದಪದ್ಮಗಳಿಗೆ ಎರಗಿ ತನ್ನ ಏರಿಬಂದ
ವಿಮಾನದಲ್ಲಿ(ಆ ನಮಿ ವಿನಮಿಗಳಿಬ್ಬರನ್ನೂ)ಕುಳ್ಳಿರಿಸಿಕೊಂಡು ಹೋಗಿ
ಹಿಮಾಲಯ (ಟಿ ರಜತಾಚಲ) ಪರ್ವತವನ್ನು ತಲುಪಿ (೯.೧೧೦ ವ)

ಎಂದು ಮೂಲವನ್ನು ಎಚ್ಚರಿಕೆಯಿಂದ ಅನುಸರಿಸಲಾಗಿದೆ.

ಗ್ರಂಥ್ಯಾಂತದಲ್ಲಿ ಅಂತಿಮವಾಗಿ ಮೂರು ಅನುಬಂಧಗಳಲ್ಲಿ ಓದುಗರಿಗೆ ಮತ್ತಷ್ಟು ಹೆಚ್ಚಿನ ಮಾಹಿತಿ ನೀಡಲಾಗಿದೆ. ಅನುಬಂಧ ೧ ರಲ್ಲಿ 'ಭವಾವಳಿ ಪ್ರಸ್ತಾರಗಳು' ಎಂಬ ಶೀಷಿಕೆಯಡಿ ಕೃತಿಯೊಳಗೆ ಬರುವ ಭವಾವಳಿಗಳನ್ನು ಸವಿವರವಾಗಿ ಪಟ್ಟಿಹಾಕಿ,ಅವು ಬರುವ ಸಂದರ್ಭಸೂಚಿಯೊಂದಿಗೆ ಅವುಗಳ ಸಂಬಂಧವನ್ನು ಸ್ಪಷ್ಟವಾಗಿ ನೀಡಲಾಗಿದೆ. ಇದರಿಂದ ಓದುಗರಿಗೆ ಕೃತಿಯೊಳಗಿನ ಭವಾವಳಿಗಳ ಗೊಂದಲ ನಿವಾರಣೆಯಾಗುತ್ತದೆ.ಅನುಬಂಧ ೨ ರಲ್ಲಿ ಜೈನಧರ್ಮ ಪಾರಿಭಾಷಿಕಗಳಲ್ಲೊಂದಾದ ಷೋಡಶಭಾವನೆಗಳ ಪಟ್ಟಿಯನ್ನು ನೀಡಲಾಗಿದೆ.ಇದು "ಮೈಸೂರು ವಿಶ್ವವಿದ್ಯಾನಿಲಯ ಜೈನಾಲಜಿ ವಿಭಾಗದ ಪ್ರೊ.ಶುಭಚಂದ್ರ ಅವರು ದೊರಕಿಸಿಕೊಟ್ಟ ಸಂಮಂತಭದ್ರ ವಿರಚಿತ ರತ್ನಕರಂಡಕ ಶ್ರಾವಕಚಾರ(ಪಂಡಿತ ಸದಾಸುಖಜಿಯವರ ಹಿಂದಿ ವಚನಿಕೆಗೆ ಮಾನ್ಯ ಶ್ರೀ ಅಣ್ಣಾರಾಯ ಅಪ್ಪಣ್ಣಮಿರ್ಜಿ,ಸೇಡಬಾಳ ಅವರು ಬರೆದಿರುವ ಕನ್ನಡ ಅನುವಾದ)ದಿಂದ ಷೋಡಶಭಾವನೆಗಳನ್ನು ಕುರಿತಂತೆ ಒಂದು ಟಿಪ್ಪಣಿ" ಇದನ್ನು ಇಲ್ಲಿ ಅಗತ್ಯವಾದ ಕಾರಣ ಸವಿವರಸಹಿತವಾಗಿ ಪಟ್ಟಿಮಾಡಲಾಗಿದೆ.ಅನುಬಂಧ ೩ ರಲ್ಲಿ ಈ ಹಿಂದೆಯೇ ಎಲ್.ಬಸವರಾಜು ಅವರ 'ಸರಳ ಪಂಪಭಾರತ'ದ ಅನುಬಂಧ ೨ ರಲ್ಲಿರುವಂತೆ 'ಪಂಪನ ತಮ್ಮ ಜಿನವಲ್ಲಭನಶಾಸನ' ವನ್ನು ಕಾಲ, ಸ್ಥಳವಿವರ ಸಹಿತ ನೀಡಲಾಗಿದೆ. ಶಾಸನವನ್ನು ಸಂಗ್ರಹಿಸಿದ ಎಂ.ಎಂ. ಅಣ್ಣಿಗೇರಿ ಹಾಗೂ ಆರ್.ಶೇಷಶಾಸ್ತ್ರೀ ಅವರಿಂದ ಅಲ್ಲದೆ ಎಚ್.ಎಂ.ನಾಗರಾಜ್ ಅವರ ನೆರವಿನಿಂದ ಇದನ್ನು ಸಿದ್ಧಪಡಿಸಲಾಗಿದೆ. ಇವುಗಳನ್ನು ಹಾಗೂ ಶಾಸನದಲ್ಲಿರುವ ಕೆಲವು ಮಾಹಿತಿಗಳನ್ನು ಅಡಿಟಿಪ್ಪಣಿಯಾಗಿ ನೀಡಿದೆ.

ಎಲ್.ಬಸವರಾಜು ಅವರ ಈ 'ಪಂಪನ ಆದಿಪುರಾಣ ಕಥಾಮೃತ'ಕೃತಿಯು ೨೦೦೩ರಲ್ಲಿ ಮೈಸೂರಿನ ಗೀತಾಬುಕ್ ಹೌಸ್ ಪ್ರಕಾಶನದಿಂದ ಪ್ರಕಟಗೊಂಡಿದೆ. ಇದಕ್ಕಿಂತ ಹಿಂದೆ ಪಂಪನ ಆದಿಪುರಾಣ ಕುರಿತಂತೆ ತ.ಸು.ಶಾಮರಾಯ ಹಾಗೂ ಹಂ.ಪ.ನಾಗರಾಜಯ್ಯನವರು ಕೂಡಿ ೧೯೯೧ರಲ್ಲಿ 'ಆದಿಪುರಾಣ ದೀಪಿಕೆ'ರಚಿಸಿರುವುದನ್ನು ನೆನೆಯಬಹುದು. ಆದರೆ ಈ ಕೃತಿ ಡಿ.ಎಲ್.ಎನ್.ರ ಪಂಪಭಾರತದೀಪಿಕೆಯಂತೆ ರಚಿತವಾಗಿದೆ. ಅಂದರೆ ಕೃತಿಯ ಪ್ರತಿಪದಾರ್ಥ ನೀಡಲಾಗಿದೆಯೇ ಹೊರೆತು ಸರಳಗದ್ಯ ನೀಡಲಾಗಿಲ್ಲ. ಇದೂ ಸಹ 'ಪಂಪಭಾರತದೀಪಿಕೆ'ಯಂತೆ 'ಆದಿಪುರಾಣ'ದ ಶಬ್ದಾರ್ಥಭಂಡಾರವೆನಿಸಿದೆ. ಎಲ್.ಬಸವರಾಜು ಅವರು ಪಂಪನ ಧಾರ್ಮಿಕ ಕೃತಿ 'ಆದಿಪುರಾಣ'ವನ್ನು ಸರಳಗದ್ಯವಾಗಿ ಛಾಯಾನುವಾದ ಮಾಡುವುದರೊಂದಿಗೆ ಸಾಹಿತ್ಯಾಸಕ್ತರ ಅಗತ್ಯವನ್ನು ನೆರವೇರಿಸಿದ್ದಾರೆ ಎಂಬುದು ವಾಸ್ತವದ ಸಂಗತಿಯಾಗಿದೆ.

# ರನ್ನನ
## ಸರಳ ಗದಾಯುದ್ಧ



ಡಾ.ಎಲ್. ಬಸವರಾಜು

## ೫. ರನ್ನನ ಸರಳ ಗದಾಯುದ್ಧ

ಎಲ್.ಬಸವರಾಜು ಅವರು ಪಂಪನ ಎರಡೂ ಕೃತಿಗಳನ್ನು ಜನಸಾಮಾನ್ಯರಿಗೆ ಓದಲು ಸುಲಭವಾಗುವಂತೆ ಸರಳಾವಾದ ಹಾಗೂ ಛಾಯಾನುವಾದ ಮಾಡಿದ ತರುವಾಯ ತಮ್ಮ ವಿದ್ವತ್ಪೂರ್ಣ ಸಂಶೋಧನಾ ದೃಷ್ಟಿಯನ್ನು ರನ್ನನೆಡೆಗೂ ಹರಿಸಿದ್ದಾರೆ.ಪಂಪನ ಎರಡೂ ಕೃತಿಗಳನ್ನು ಸರಳಾನುವಾದ ಮಾಡಿರುವಂತೆ ರನ್ನನ ಲೌಕಿಕಗ್ರಂಥವಾದ 'ಸಾಹಸಭೀಮ ವಿಜಯಂ' ಅಥವಾ 'ಗದಾಯುದ್ಧ' ಸಾಮಾನ್ಯ ಓದುಗರಿಗೆ ಸುಲಭಲಭ್ಯವಾಗಲಿ ಎಂಬ ಧ್ಯೇಯದಿಂದ ರೂಪಿಸಿದ ಕೃತಿಯೇ ಅವರ ಇತ್ತೀಚಿನ 'ರನ್ನನ ಸರಳ ಗದಾಯುದ್ಧ' ಕೃತಿಯಾಗಿದೆ.

ರನ್ನಕವಿ ಪಂಪ ನಿರ್ಮಿಸಿದ ಕಾವ್ಯಮಾರ್ಗವನ್ನು ಅನುಸರಿಸಿ,ಜೈನಧರ್ಮದ ಎರಡನೇ ತೀರ್ಥಂಕರನಾದ ಅಜಿತನಾಥನನ್ನು ಕುರಿತು 'ಅಜಿತ ತೀರ್ಥಂಕರ ಪುರಾಣಂ' ಎಂಬ ಆಗಮಿಕ ಕಾವ್ಯವನ್ನೂ, ಪಂಪಭಾರತದ ಗದಾಸೌಪ್ತಿಕ ಪರ್ವದ ಭಾಗವನ್ನಷ್ಟೆ ಆರಿಸಿಕೊಂಡು,ತನ್ನ ಆಶ್ರಯದಾತನನ್ನು ಕಥಾನಾಯಕ ಭೀಮನೊಡನೆ ಸಮನ್ವಯಗೊಳಿಸಿ ಸಿಂಹಾವಲೋಕನ ಕ್ರಮದಿಂದ'ಸಾಹಸಭೀಮ ವಿಜಯಂ' ಎಂಬ ಲೌಕಿಕಕಾವ್ಯವನ್ನು ರಚಿಸಿದ್ದಾನೆ. ಅಲ್ಲದೆ ರನ್ನ ತನ್ನ ಪ್ರತಿಭಾಪಾಂಡಿತ್ಯದಿಂದ ಕನ್ನಡಿಗರಿಂದ 'ಶಕ್ತಿಕವಿ' ಎನಿಸಿಕೊಂಡಿರುವುದು ಮಾತ್ರವಲ್ಲದೆ, "ರನ್ನನಿರುವ ಕನ್ನಡಕ್ಕೆ ಅನ್ಯರಿಂದ ಬಹುದೆ ಧಕ್ಕೆ? ಬರಿಯ ಕವಿಯೆ ಸಿಡಿಲ ಚಕ್ಕೆ"[೧] ಎಂಬ ಪ್ರಶಂಸೆಗೆ ಪಾತ್ರವಾಗಿರುವುದು ಸಾಹಿತ್ಯಾಸಕ್ತರಿಗೆಲ್ಲಾ ತಿಳಿದಿರುವ ಸಂಗತಿಯಾಗಿದೆ. ಹೀಗೆ ಕಾವ್ಯಸತ್ತ್ವವುಳ್ಳ ರನ್ನನ ಈ ಕಾವ್ಯ ಸಾವಿರಾರು ವರ್ಷಗಳಿಂದ ಕನ್ನಡಿಗರಿಂದ ಓದಿಸಿಕೊಂಡು ಬಂದಿರುವುದು ಅವನ ಕಾವ್ಯ ಮೌಲ್ಯಕ್ಕೆ ಸಾಕ್ಷಿಯಾಗಿದೆ.

ಪಂಪನಂಥ ಆದಿಕವಿಯ ಪ್ರಾಚೀನ ಕೃತಿಗಳು ಗತದಲ್ಲಿ ಹೂತು ಅಜ್ಞಾತರಾಗಿದ್ದಂತೆ,ರನ್ನ ಹಾಗೂ ಆತನ ಕೃತಿಗಳು ಮಸುಕಾಗಿದ್ದರಲ್ಲಿ ಆಶ್ಚರ್ಯವಿಲ್ಲ. ವಿದೇಶಿ ವಿದ್ವಾಂಸರ ಶತಶತಮಾನಗಳ ಸಂಶೋಧನೆ ಸಾಹಸದ ಸತ್ಫಲವಾಗಿ ಪ್ರಾಚೀನಕವಿಗಳ ಕೃತಿಗಳು ನಮಗಿಂದು ಲಭ್ಯವಾಗಿವೆ. ವಿದೇಶಿ ವಿದ್ವಾಂಸರು ಹದಮಾಡಿದ ಸಂಶೋಧನೆ ಎಂಬ ಕನ್ನೆನೆಲದ ಮೇಲೆ ದೇಶಿಯ ವಿದ್ವಾಂಸರು ಸಾಹಿತ್ಯಫಲ ಬೆಳೆದರು. ದೇಶಿಯ ವಿದ್ವಾಂಸರುಗಳಾದ ಎಂ.ಎ.ರಾಮಾನುಜಯ್ಯಂಗಾರ್ ಹಾಗೂ ಎಸ್.ಜಿ.ನರಸಿಂಹಾಚಾರ್ಯರು ರನ್ನನ 'ಗದಾಯುದ್ಧ'ವನ್ನು ಮೊದಲಬಾರಿಗೆ ಪರಿಷ್ಕರಿಸಿ ಪ್ರಕಟಿಸಿದರು.

ಎಲ್.ಬಸವರಾಜು ಅವರು ಕೃತಿಯ ಆರಂಭದ ಅರಿಕೆ ವಿಭಾಗದಲ್ಲಿ ರನ್ನನ ಗದಾಯುದ್ಧದ ಹಿಂದಿನ ಪರಿಷ್ಕರಣಗಳ ವೃತ್ತಾಂತವನ್ನು ಪರಿಚಯಿಸುವುದು ತಮ್ಮ ಕರ್ತವ್ಯವೆಂದು ಭಾವಿಸಿ ಅದನ್ನು ಸವಿವರವಾಗಿ ತಿಳಿಸಿರುವರು.ಅಂದರೆ ಅವರು ರನ್ನನ ಗದಾಯುದ್ಧ ೧೮೮೫ ರಲ್ಲಿ ಮೊದಲಬಾರಿಗೆ ಎಂ. ಎ. ರಾಮಾನುಜಯ್ಯಂಗಾರ್ ಹಾಗೂ

---

೧. ಕುವೆಂಪು ವಿಭೂತಿಪೂಜೆ ಪುಟ ೧೪

ಎಸ್.ಜಿ.ನರಸಿಂಹಾಚಾರ್ ಅವರಿಂದ ಪರಿಷ್ಕೃತವಾಗಿ ಪ್ರಕಟವಾಯಿತು. ಅವರು ಪರಿಷ್ಕರಣಕಾರ್ಯಕ್ಕಾಗಿ 'ಕ' ಮತ್ತು 'ಗ' ಎಂದು ಸಂಕೇತಿಸಲಾದ ಎರಡು ಕಾಗದದ ಪ್ರತಿಗಳನ್ನು ಬಳಸಿಕೊಂಡಿರುವುದಾಗಿ ತಿಳಿಸಿದ್ದಾರೆ.ಈ ಪರಿಷ್ಕರಣ ಪ್ರಕಟವಾದ ೨೦ ವರ್ಷಗಳಲ್ಲಿ ಮುದ್ರಿತಪ್ರತಿಗಳೆಲ್ಲಾ ತೀರಿಹೋದ ಕಾರಣ, ಎಂ.ಎ.ರಾಮಾನುಜಯ್ಯಂಗಾರ್ಯರು ತಾವು ಹಿಂದಿನ ಪರಿಷ್ಕರಣಕ್ಕಾಗಿ ಬಳಸಿದ್ದ ಪ್ರತಿಗಳೊಂದಿಗೆ 'ತ' ಎಂಬ ಸಂಕೇತದ ಪ್ರತಿಯನ್ನು ಬಳಸಿಕೊಂಡು ೧೯೧೯ ರಲ್ಲಿ ಗದಾಯುದ್ಧದ ಎರಡನೇ ಮುದ್ರಣವನ್ನು ಹೊರತಂದರು ಎಂದಿದ್ದಾರೆ.

ಮುಂದುವರಿದು ಎಲ್.ಬಸವರಾಜು ಅವರು ಮೇಲೆ ಸಂಕೇತಿಸಲಾದ ಮೂರೂ ಪ್ರತಿಗಳ ಸ್ವರೂಪವನ್ನು ತಿಳಿಸುತ್ತಾರೆ. ಅಂದರೆ 'ಕ', 'ಗ' ಮತ್ತು 'ತ' ಪ್ರತಿಗಳು ದೊರೆತ ವಿಳಾಸ, ಅವುಗಳ ವಿನ್ಯಾಸವನ್ನು ಸ್ಪಷ್ಟಪಡಿಸುತ್ತಾರೆ. ಇವುಗಳಲ್ಲಿ 'ತ' ಪ್ರತಿಯು ಉಳಿದೆರಡು ಪ್ರತಿಗಳಿಗಿಂತ ಭಿನ್ನ ಎಂದು ಹೇಳಿರುವ ಎಲ್.ಬಸವರಾಜು ಅವರು, ಮುಂದೆ ಈ 'ತ' ಪ್ರತಿಯ ಸಹಾಯದಿಂದಲೇ ಎಂ.ಎ.ರಾಮಾನುಜಯ್ಯಂಗಾರ್ಯರು ೧೯೨೫ರಲ್ಲಿ ಉತ್ತಮವಾದ ಪರಿಷ್ಕರಣದೊಂದಿಗೆ 'ಗದಾಯುದ್ಧ'ದ ಮೂರನೇ ಮುದ್ರಣವನ್ನು ಹೊರತರಲು ಸಾಧ್ಯವಾಯಿತೆಂದು ನೆನೆಯುತ್ತಾರೆ.

ಅನಂತರದಲ್ಲಿ ಕೆ.ವಿ.ಕೃಷ್ಣಭಟ್ಟರು ಹಿಂದಿನ ಮೂರು ಪರಿಷ್ಕರಣಗಳ ಸಹಾಯ ಪಡೆದರೊಂದಿಗೆ, ನಾಗವರ್ಮನ ಕಾವ್ಯಾವಲೋಕನ, ಕೇಶಿರಾಜನ ಶಬ್ದಮಣಿದರ್ಪಣ ಹಾಗೂ ಸಾಳ್ವನ ರಸರತ್ನಾಕರದಲ್ಲಿ ಸಾಂದರ್ಭಿಕವಾಗಿ ಬಳಕೆಯಾಗಿರುವ ಉದಾಹೃತ ಗದಾಯುದ್ಧದ ಕೆಲವು ಉಲ್ಲೇಖಗಳನ್ನಾಧರಿಸಿ ಪಾಠಪರಿಷ್ಕರಣವನ್ನು ಮಾಡಿ ೧೯೪೯ ರಲ್ಲಿ ಮೊದಲ ಮುದ್ರಣವಾಗಿ ಹಾಗೂ ೧೯೭೩ ರಲ್ಲಿ ಎರಡನೇ ಮುದ್ರಣವಾಗಿ ಮೈಸೂರಿನ ಗೀತಾಬುಕಹೌಸ್ ಪ್ರಕಾಶನದಿಂದ ಹೊರತಂದರು ಎಂದಿದ್ದಾರೆ.

ತರುವಾದ ಹಂತದಲ್ಲಿ ತೀ.ನಂ.ಶ್ರೀ ಅವರ 'ರನ್ನಕವಿ–ಗದಾಯುದ್ಧ ಸಂಗ್ರಹಂ'ಹಿಂದಿನ ಕೆಲವು ಪರಿಷ್ಕರಣಗಳೊಂದಿಗಲ್ಲದೆ ಕೆಲವು ಸಾಂದರ್ಭಿಕ ಆಕರಗಳ ನೆರವಿನಿಂದ ೧೯೪೯ ರಲ್ಲಿ ಪ್ರಕಟವಾಯಿತು. ಇದು ವಿದ್ವಜ್ಜನರ ಪ್ರೀತಿಗೆ ಪಾತ್ರವಾಗಿ ಹಲವಾರು ಮುದ್ರಣ ಕಂಡಿದೆ. ೧೯೮೫ ರಲ್ಲಿ ಪ್ರೊ.ಬಿ.ಎಸ್.ಸಣ್ಣಯ್ಯ ಮತ್ತು ಪ್ರೊ.ರಾಮೇಗೌಡ ಅವರು ಈ ಹಿಂದೆ ಎಂ.ಎ.ರಾಮಾನುಜಯ್ಯಂಗಾರ್ಯರ ೩ ಆವೃತ್ತಿಗಳನ್ನು ಬಳಸಿಕೊಂಡಿಲ್ಲದೆ, ಈವರೆಗೆ ಯಾರೂ ಬಳಸದಿದ್ದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿದ್ದ ಕೆ.೭೫೭ ನಂಬರಿನ ಓಲೆಪ್ರತಿ ಹಾಗೂ ಎನ್.೧೧೭ನೇ ಮೈಕ್ರೋಫಿಲಂ ಪ್ರತಿಗಳನ್ನು ಬಳಸಿಕೊಂಡಿದ್ದಾದರೂ, ಅವು ಈ ಹಿಂದೆ ಬಳಸಿದ್ದ 'ಗ' ಪ್ರತಿಯ ನಕಲೇ ಎಂದು ಸಂಪಾದಕರೇ ಒಪ್ಪಿಕೊಂಡಿದ್ದಾರೆ ಎಂದು ಎಲ್.ಬಸವರಾಜು ಅವರು ತಿಳಿಸಿದ್ದಾರೆ.

ಪ್ರಸ್ತುತ ತಮ್ಮ ಪರಿಷ್ಕರಣಕ್ಕೆ ಎಲ್.ಬಸವರಾಜು ಅವರು ಮದ್ರಾಸ್ ಸರ್ಕಾರಿ ಪ್ರಾಚ್ಯಕೋಶಾಗಾರದ ತೃಟಿತ ಅಸಮಗ್ರ ಓಲೆಪ್ರತಿಯ (= ತ) ನಕಲಾದ ಜಿ.ಜಿ.ಮಂಜುನಾಥ (ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಭಂಡಾರದಲ್ಲಿ ಕನ್ನಡ ಹಸ್ತಪ್ರತಿ ತಜ್ಞರು)ರ ಬಳಿಯಿದ್ದ ಪ್ರತಿಯನ್ನು ಹಾಗೂ ಈ ಹಿಂದಿನ ಎಲ್ಲಾ ಆವೃತ್ತಿಗಳನ್ನು ಬಳಸಿಕೊಳ್ಳಲಾಗಿದೆ ಎಂದಿದ್ದಾರೆ. ಜೊತೆಗೆ ಈವರೆಗೆ ರನ್ನನ ಕೃತಿಯ ಬಗೆಗಿನ ಹಸ್ತಪ್ರತಿಗಳನ್ನು ರೇಖಾಚಿತ್ರದ

ಮೂಲಕ ಸ್ಪಷ್ಟಪಡಿಸಿದ್ದಾರೆ. ಅಲ್ಲದೆ ಪರಿಷ್ಕರಣಕಾರ್ಯಕ್ಕೆ ದೊರೆತ ಹಸ್ತಪ್ರತಿಗಳು ಶುದ್ಧವಾಗಿಲ್ಲ ಎಂದು ಅತೃಪ್ತಿವ್ಯಕ್ತಪಡಿಸುತ್ತಾರೆ.ಅಲ್ಲದೆ ಈ ಸ್ಥಿತಿಗಿರುವ ಕಾರಣಗಳ ಪಟ್ಟಿಮಾಡುತ್ತಾರೆ. ಅಂದರೆ ರನ್ನನ ಈ ಗದಾಯುದ್ಧ ಲೌಕಿಕಕಾವ್ಯ,ಚಂಪೂ ರೂಪದ್ದು, ಹಳಗನ್ನಡದ್ದು, ಪ್ರಾಚೀನವಾದುದು..... ಆದುದರಿಂದ ಇದರ ಹಸ್ತಪ್ರತಿಗಳು ಹೆಚ್ಚಿನ ಸಂಖ್ಯೆಯಲ್ಲಿರದೆ ದುರ್ಲಭವಾಗಿದೆ ಎಂದಿರುವುದು ಉಚಿತವೇ ಆಗಿದೆ. ಒಟ್ಟಾರೆ ರನ್ನನ 'ಗದಾಯುದ್ಧ'ದ ಹಸ್ತಪ್ರತಿ ಹಾಗೂ ಪರಿಷ್ಕರಣಗಳ ಬಗ್ಗೆ ಎಲ್.ಬಸವರಾಜು ಅವರು- "ರನ್ನನ ಮುದ್ರಿತ ಗದಾಯುದ್ಧ ಕಾವ್ಯಪರಂಪರೆಗೆ ಜನಕ ತಂದೆ ಮ॥ಬಿ.ಎಲ್.ರೈಸ್‌ರಾದರೆ-ಅದನ್ನು ಸಾಕಿಸಲಹಿ ಜನಮಾನ್ಯವಾಗುವಂತೆ ಮಾಡಿದವರು ದಿವಂಗತ ಎಂ.ಎ.ರಾಮಾನುಜಯ್ಯಂಗಾರ್ಯರು. ಉಳಿದವರೆಲ್ಲಾ ಹಿತೈಷಿ ಬಳಗವಷ್ಟೆ"[೨] ಎಂದು ಹೇಳಿರುವುದು ಸಂಪಾದಕರ ವಿನಯದ ಪ್ರತೀಕವಾಗಿದೆ.

ಎಲ್.ಬಸವರಾಜು ಅವರು ಈವರೆಗೆ ರನ್ನನ ಗದಾಯುದ್ಧದ ಪರಿಷ್ಕರಣೆಯ ಬಗ್ಗೆ ಚರ್ಚಿಸಿ ತರುವಾಯ ತಮ್ಮ ಕೃತಿರಚನೆಗೆ ಕಾರಣವನ್ನು ಸೂಚಿಸುತ್ತಾರೆ. ಭಾಷಾಬಳಕೆ ಕಾವ್ಯಾನಂದಕ್ಕೆ ತೊಡಕಾಗಬಾರದೆಂದು ಹೇಳುತ್ತಾ-"ಕ್ಲೇಶಕಾರಿಯಾಗಿರುವುದರಿಂದ-ಆ ಭಾಷೆಯಲ್ಲಿರುವ ಕಾವ್ಯಗಳನ್ನು ಅವರೆಲ್ಲರೂ ಓದಿ ಅರ್ಥಮಾಡಿಕೊಂಡು ಕಾವ್ಯಾನಂದವನ್ನು ಪಡೆಯಲು ಅನುಕೂಲವಾಗುವಿದಕ್ಕಾಗಿ-ಪಂಪ,ರನ್ನ ಮುಂತಾದವರ ಆ ಹಳಗನ್ನಡ ಭಾಷೆಯ ಮೈಗೆಡದಂತೆ ಬಿಡಿಸಿ ಅಚ್ಚು ಹಾಕಿಸಿಕೊಡಬೇಕಾದ್ದು ಈ ಕಾಲದ ಗ್ರಂಥಸಮಪಾದಕರು ಕೈಗೊಳ್ಳಬೇಕಾದ ಒಂದು ಜನಪರಸೇವೆಯೇ ಆಗುತ್ತದೆ"[೩] ಎಂದಿದ್ದಾರೆ. ಹೀಗೆ ಓದುಗರ ಅಗತ್ಯಗನುಗುಣವಾಗಿ ಜನಸಾಮಾನ್ಯರಿಗೆ ಪ್ರಾಚೀನಕಾವ್ಯಗಳನ್ನು ಓದಲು ಸುಲಭಲಭ್ಯವಾಗುವಂತೆ ಸರಳಾನುವಾದ ಮಾಡಿರುವ ಎಲ್.ಬಸವರಾಜು ಅವರ ಈ ಕಾರ್ಯ ಜನಪರ ಕಾಳಜಿಯ ಸಂಕೇತವೇ ಸರಿ.

ಎಲ್.ಬಸವರಾಜು ಅವರು 'ರನ್ನನ ಸರಳ ಗದಾಯುದ್ಧ' ಗ್ರಂಥದಲ್ಲಿ ಈ ಹಿಂದೆ ಪಂಪನ ಕೃತಿಗಳ ಸರಳಾನುವಾದ ಮಾಡುವಾಗ ಅನುಸರಿಸಿದ ಶೈಲಿಯನ್ನೇ ಇಲ್ಲಿಯೂ ಅನುಸರಿಸಿದ್ದಾರೆ. ಆದರೆ ಸರಳ ಪಂಪಭಾರತದಂತೆ ಮೂಲದ ಪ್ರತಿಸಾಲನ್ನು ಸೂಚಿಸಲು ಉಪಗೀಟುಗಳನ್ನು ಬಳಸಿಲ್ಲ.ಓದುಗರು ಓದಲು ಅನುವಾಗುವಂತೆ ಅರ್ಥಸ್ಪಷ್ಟತೆಗಾಗಿ ಮಾತ್ರ ವಿಂಗಡಿಸಿ ಜೋಡಿಸಿದ್ದಾರೆ. ಎಂದಿನಂತೆ ಪ್ರತಿಪದ್ಯದ ಮೇಲೆ ಪ್ರತಿಸಾರದ ನಿರ್ದೇಶನಕ್ಕಾಗಿ ಉಪಶೀರ್ಷಿಕೆಯನ್ನು ಹಾಗೂ ಪದ್ಯಾಂತ್ಯದಲ್ಲಿ ಅದು ಹೊಂದಿರುವ ನಿರ್ದಿಷ್ಟ ಛಂದೋಪ್ರಕಾರವನ್ನು ಸೂಚಿಸಲಾಗಿದೆ.ದುಂಡುಕಂಸಾಂತರ್ಗತದಲ್ಲಿ'(= )'ಚಿಹ್ನೆಯ ಮೂಲಕ ಪಾಠಾಂತರಗಳನ್ನು ಅಲ್ಲಲ್ಲಿ ನೀಡಲಾಗಿದೆ.ಅರ್ಥಸ್ಪಷ್ಟತೆಗಾಗಿ ಕೆಲವೆಡೆ ಅಡಿಟಿಪ್ಪಣಿ ಇದೆ.ಅಲ್ಲದೆ ಪದ್ಯದ ಅರ್ಥ ಮುಂದಿನ ಪದ್ಯದಲ್ಲಿ ಮುಂದುವರಿಕೆಯಾಗಿದ್ದರೆ,ಅದನ್ನು '+'ಚಿಹ್ನೆಯ ಮೂಲಕ ಸಂಕೇತಿಸಲಾಗಿದೆ ಹಾಗೂ ಸಾಂಧರ್ಭಿಕ ಸ್ಪಷ್ಟತೆಗಾಗಿ ದುಂಡುಕಂಸಾಂತರ್ಗತದಲ್ಲಿ ಸಂಬಂಧಿತ

---

೨. ಎಲ್.ಬಸವರಾಜು, **ರನ್ನನ ಸರಳಗದಾಯುದ್ಧ** ಅರಿಕೆ, ಸಾ ರಾ ಎಂಟರ್‌ಪ್ರೈಸಸ್, ಮೈಸೂರು ಮೊದಲ ಮುದ್ರಣ, ೨೦೦೫, ಪುಟ ix

೩. ಎಲ್.ಬಸವರಾಜು, **ರನ್ನನ ಸರಳಗದಾಯುದ್ಧ** ಅರಿಕೆ, ಸಾ ರಾ ಎಂಟರ್‌ಪ್ರೈಸಸ್, ಮೈಸೂರು ಮೊದಲ ಮುದ್ರಣ, ೨೦೦೫, ಪುಟ x

ಪದವನ್ನು ನೀಡಲಾಗಿದೆ. ಉಳಿದಂತೆ ಪ್ರಥಮಾಶ್ವಾಸದಿಂದ ದಶಮಾಶ್ವಾಸದವರೆಗೆ ಎಲ್ಲಿಯೂ ಮೂಲಕ್ಕೆ ಭಂಗಬಾರದಂತೆ ಚಾಚುತಪ್ಪದೆ ಅನುಸರಿಸಲಾಗಿದೆ. ಕೆಲವು ಪ್ದಯಗಳ ಉದಾಹರಣೆಗಳ ಮೂಲಕ ಕೃತಿಯಾಂತರ್ಯವನ್ನು ಅರಿಯಬಹುದು.

ಪ್ರೊ.ಬಿ.ಎಸ್.ಸಣ್ಣಯ್ಯ ಮತ್ತು ಪ್ರೊ.ರಾಮೇಗೌಡ ಅವರು ಸಂಪಾದಿಸಿದ ಮೂಲಪದ್ಯಭಾಗಗಳು :

(ಮುಂದಿನ ಉದಾಹರಣೆಗಳು ಈ ಅನುಕ್ರಮದಲ್ಲಿಯೇ ಇದೆ)

ಉದಾ:೧

ಗಳಿಯಿಸುತಿರೆ ಕಭರಿಭರಂ
ಗಳಿಯಿಸುತಿರೆ ನಯನವಾರಿ ನಿಸ್ನಾನನದಿಂ
ನಳಿನಾನನೆ ನೀನಿರೆ ಕುರು
ಕುಳಾಂತಕಂ ಗಳಿತಕೋಪನೇ ಕಲಿಭೀಮಂ (೧.೬೩)

ಎಲ್.ಬಸವರಾಜು ಅವರು ಪರಿಷ್ಕರಿಸಿ ಸರಳಾನುವಾದ ಮಾಡಿರುವ ಪದ್ಯ:

**ಭೀಮನು ಪ್ರಕಟವಾಗಿ ದ್ರೌಪದಿಗೆ ಧೈರ್ಯ ಹೇಳಿ ಸಂತೈಸಿದ**

ಗಳಿಯಿಸುತಿರೆ ಕಬರಿ ಭರಂ
ಗಳಿಯಿಸುತಿರೆ ನಯನವಾರಿ ನಿಸ್ನಾನನದಿಂ
ನಳಿನಾನನೆ ನೀನಿರೆ
ಕುರುಕುಲಾಂತಕಂ ಗಳಿತಕೋಪನೇ ಕಲಿಭೀಮ? (ಕಂದ, ೧.೬೩)

ಉದಾ:೨

ಅಂತು ಪಂಚಭೂತ ಸಾಕ್ಷಿಯೊಳ್ ಪೂಣ್ದು ನುಡಿದಜಾತಶತ್ರುಗೆ ಕುರು
ಕುಲ"ಪ್ರಧಾನಶತ್ರುವೆ"ನಿಸಿದ ಸಾಹಸಭೀಮ "ನಮಸ್ಕಾರಂಗೆಯ್ದಿಂತೆಂದಂ" (೬.೨೨ ವ)

**ಆ ಧರ್ಮರಾಯನ ಮುಂದೆಯೇ ದುರ್ಯೋಧನನ್ನು ಕೊಲ್ಲುವೆನೆಂದು ಅಬ್ಬರಿಸಿದ**

ವಚನ ॥ ಅಂತು ಪಂಚಭೂತ ಸಾಕ್ಷಿಯೊಳ್ ಪೂಣ್ದು ನುಡಿದು–
(ಸಂತೈಸುತ್ತ ಬಳಿ ಬಂದ)
ಅಜಾತಶತ್ರು (=ಧರ್ಮರಾಯ)ಗೆ– ಕುರುಕುಲ ಪ್ರಧಾನಶತ್ರುವೆನಿ
ಸಿದ ಸಾಹಸಭೀಮಂ ಸಾಷ್ಟಾಂಗ ನಮಸ್ಕಾರ ಗೆಯ್ದು ಇಂತೆಂದಂ– (೬.೨೩ ವ)

ಉದಾ:೩

ಗುರುವಿನ ನೆತ್ತರಂ ಕುಡಿವೆನಪ್ಪೊಡವಂ ದ್ವಿಜವಂಶಜಂ ನಿಜಾ
ವರ ಜನ ನೆತ್ತರಂ ಕುಡಿವೆನಪ್ಪೊಡೆ ಭೀಮನೆ ಪೀರ್ದನೆಯ್ದೆ ಭೀ ।
ಷ್ಮರ ಬಿಸುನೆತ್ತರಂ ಕುಡಿವೊಡಿನ್ನುಮೊಳಂ ಕುರುರಾಜ ನಿನ್ನ ನೆ
ತ್ತರ ಸವಿನೋಟ್ಟಿನಂ ಬಯಸಿ ಬಾತಪೆನೆಂದುದದೊಂದು ಪುಲ್ಮರುಳ್ ॥ (೪.೪೩)

**ಭೂತವೊಂದು ಬಾಯಾರಿ ದುರ್ಯೋಧನನ ರಕ್ತಕ್ಕಾಗಿ ಹಲುಬುತ್ತದೆ.**

ಗುರುವಿನ ನೆತ್ತರಂ ಕುಡಿವೆನಪ್ಪೊಡೆ-
ಅವಂ ದ್ವಿಜ ವಂಶಜಂ,ನಿಜಾವರಜನ ನೆತ್ತರಂ ಕುಡಿವೆನಪ್ಪೊಡೆ-
ಭೀಮನ್ ಪೀರ್ದನ್,ಎಯ್ದೆ ಭೀಷ್ಮರ ಬಿಸುನೆತ್ತರಂ ಕುಡಿವೊಡೆ-
ಇನ್ನುಮ್ ಒಳಂ-
ಕುರುರಾಜ, ನಿನ್ನ ನೆತ್ತರಂ ಸವಿನೋಟಿಪ್ಪೊಡೆ ಆಂ ಬಯಸಿ ಬಂದಪೆನ್-
ಎಂದುದೊಂದು ಪುಲ್ಮರುಳ್ (ಚಂಪಕ. ೪.೪೩)

ಆದರೆ ಛಂದೋವಿನ್ಯಾಸಕ್ಕೆ ಭಂಗಬಂದಿದೆ ಎಂಬ ಸಾಂಪ್ರದಾಯಿಕ ವಿದ್ವಾಂಸರ ಮಾತಿಗೆ ಪ್ರತಿಕಿಯೆಯಾಗಿ-"ಇಂಥ ಕಾವ್ಯವನ್ನು ಕನ್ನಡಿಗರೆಲ್ಲರೂ ಸುಲಭವಾಗಿ ಓದಿ ಅದರ ಆನಂದವನ್ನು ಗಾಢವಾಗಿ ಅನುಭವಿಸಲೆಂದು ಮೂಲಕಾವ್ಯದ ಕಂದವೃತ್ತಗಳ ಸಂಧಿಸಮಾಸಗಳನ್ನು ಬಿಡಿಸಿ ಸರಳಮಾಡಿ -ಅಲ್ಲಲ್ಲಿಗೆ ಶೀರ್ಷಿಕೆಗಳನ್ನು ಅಳವಡಿಸಿ ಕೊಡಲಾಗಿದೆ.ಇದರಿಂದ ಕಾವ್ಯದ ಸೊಗಸನ್ನೆಲ್ಲಾ ಸವಿಯಲಾಗುವುದಾದರೆ ಸಾಕು,ಛಂದಶ್ಶಾಸ್ತ್ರದ ಮಾತಿನ್ನೇಕೆ?"ಮುಂದುವರಿದು "ತಳಿಗೆಯಲ್ಲಿ ಹೋಳಿಗೆಯಲ್ಲಿ ಗುಂಡಾಗಿಯೇ ಇಟ್ಟುಕೊಂಡಿದ್ದರೆ-ಬಂದ ಭಾಗ್ಯವೇನು?ಮುರಿದು ತಿನ್ನಲೇ ಬೇಕಲ್ಲವೇ?" ಎಂದು ಒಂದು ಉಪಮೆಯ ಮೂಲಕ ತೀಕ್ಷ್ಣವಾಗಿ ಕೃತಿಯ ಬೆನ್ನುಡಿಯಲ್ಲಿ ತಿಳಿಸಿದ್ದಾರೆ.ಗ್ರಂಥಾಂತ್ಯದಲ್ಲಿ ಆಶ್ವಾಸಾನುಕ್ರಮದಲ್ಲಿ ಅಕಾರಾದಿಯಾಗಿ 'ಸಹೃದಯಾಭ್ಯಾಸಿಗಳಿಗೆ ತಾತ್ಪರ್ಯಾರ್ಥ'ಎಂಬ ಶೀರ್ಷಿಕೆಯಡಿ ಕಠಿಣಪದಗಳ ಅರ್ಥವನ್ನು ಅವುಗಳು ಬಳಕೆಯಾಗಿರುವ ನಿರ್ದಿಷ್ಟ ಸಂಖ್ಯಾಸೂಚಿಯೊಂದಿಗೆ ನೀಡಲಾಗಿದೆ.

ಎಲ್.ಬಸವರಾಜು ಅವರ ಪ್ರಸ್ತುತ ಈ ಕೃತಿಯು ಓದುಗರಿಗೆ ಅರ್ಥಸ್ಪಷ್ಟತೆಯನ್ನು ಕಲ್ಪಿಸುವ ದೃಷ್ಟಿಯಿಂದಲೇ ರಚಿತವಾಗಿದೆ. ಸರಳ ಪಂಪಭಾರತದಂತೆ ಉಪಗೀಟುಗಳ ಮೂಲಕ ಮೂಲದ ಸಾಲುಗಳನ್ನು ನಿರ್ದೇಶಿಸಿದ್ದರೆ ಹೆಚ್ಚು ಉಪಯುಕ್ತವಾಗುತ್ತಿತ್ತು. ಜೊತೆಗೆ ರನ್ನನ ಕೆಲವು ಜೀವನವಿಚಾರ,ಕಾವ್ಯವಿಮರ್ಶೆಯ ಬಗ್ಗೆ ಹೆಚ್ಚು ಸವಿವರವಾಗಿ ಚರ್ಚಿಸಿದ್ದರೆ ಮತ್ತಷ್ಟು ಮೌಲಿಕವಾಗುತ್ತಿತ್ತು ಎನಿಸುತ್ತದೆ.ಮುಂದೆ 'ರನ್ನನ ಗದಾಯುದ್ಧ ಕಥಾಮೃತ' ಮೂಲಕ ಇದು ಸಾರ್ಥಕವಾಗುತ್ತದೆಯೋ ಎಂಬುದನ್ನು ಕಾದು ನೋಡಬೇಕಾಗಿದೆ.ಏಕೆಂದರೆ ಪಂಪನ ಎರಡೂ ಕಾವ್ಯಗಳನ್ನು ಸರಳಾನುವಾದ,ಛಾಯಾನುವಾದ ಮಾಡಿರುವ ಎಲ್.ಬಸವರಾಜು ಅವರು ಗದಾಯುದ್ಧಕ್ಕೂ ಅದನ್ನು ಅನ್ವಯಿಸುವರೆಂಬ ಆಶಯ.ಒಟ್ಟಿನಲ್ಲಿ ಎಲ್.ಬಸವರಾಜು ಅವರ ಈ 'ರನ್ನನ ಸರಳ ಗದಾಯುದ್ಧ' ಕೃತಿ ಆದಷ್ಟು ಶುದ್ಧ ಪರಿಷ್ಕರಣದೊಂದಿಗೆ ಓದುಗರಿಗೆ ಓದಲು

ಸುಲಭವಾಗುವಂತೆ ರಚಿತವಾಗಿರುವುದು ಕನ್ನಡಸಾಹಿತ್ಯದಲ್ಲಿ ಒಂದು ಮಹತ್ತ್ವದ ಹೆಜ್ಜೆ ಎಂಬುದರಲ್ಲಿ ಎರಡು ಮಾತಿಲ್ಲ.

## ಇತರ ಬರಹಗಳು

ಎಲ್.ಬಸವರಾಜು ಅವರು ಈ ಹಿಂದೆ ಪಂಪರನ್ನರ ಕಾವ್ಯಗಳನ್ನು ಶುದ್ಧವಾಗಿ ಪರಿಷ್ಕರಿಸಿ ಅವುಗಳನ್ನು ಓದುಗರಿಗೆ ಸುಲಭವಾಗುವಂತೆ ಸರಳಾನುವಾದ ಹಾಗೂ ಛಾಯಾನುವಾದ ಮಾಡುವುದರೊಂದಿಗೆ ಕನ್ನಡ ಸಂಶೋಧನಾ ಕ್ಷೇತ್ರದಲ್ಲಿ ವಿಶಿಷ್ಟವಾದ ಸ್ಥಾನಪಡೆದಿದ್ದಾರೆ.ಕೇವಲ ಹಳಗನ್ನಡ ಕಾವ್ಯಗಳನ್ನು ಮಾತ್ರವಲ್ಲದೆ ಅವರ ವಿದ್ವತ್ಪೂರ್ಣ ಸಂಶೋಧನಾದೃಷ್ಟಿ ಶಾಸ್ತ್ರಗ್ರಂಥಗಳ ಮೇಲಿಯೂ ಹರಿದಿರುವುದನ್ನು ಈ ಹಿಂದೆಯೇ ನೋಡಿದ್ದೇವೆ.ಆದರೆ ಎಲ್.ಬಸವರಾಜು ಅವರ ಹಳಗನ್ನಡದ ಬಗೆಗಿನ ಅಧ್ಯಯನ ವ್ಯಾಪ್ತಿ ಇಷ್ಟಕ್ಕೆ ನಿಲ್ಲುವುದಿಲ್ಲ.ಅವರು ಈವರೆಗೂ ಅಜ್ಞಾತವಾಗಿದ್ದ ಕೆಲವು ಹಳಗನ್ನಡ ಸಂಬಂಧಿತ ಸಾಹಿತ್ಯಾಧ್ಯಯನದ ಬಗ್ಗೆ ಬೆಳಕು ಚೆಲ್ಲುವ ಪ್ರಯತ್ನ ಮಾಡಿದ್ದಾರೆ.ಅವರ ಈ ಕಾರ್ಯವೈಖರಿ ಹಿಂದಿನ ಅಧ್ಯಾಯಗಳ ವಸ್ತುವಿಷಯಗಳಿಗಿಂತ ಸ್ವಲ್ಪ ಭಿನ್ನವಾಗಿದ್ದ ಕಾರಣ ಅದನ್ನು ಈ ಅಧ್ಯಾಯದಲ್ಲಿ ಕೈಗೊಳ್ಳಲಾಗಿದೆ.

ಎಲ್.ಬಸವರಾಜು ಅವರು ಕವಿರಾಜಮಾರ್ಗವನ್ನು ಆಧಾರವಾಗಿಟ್ಟುಕೊಂಡು,ಅದರ ಸುತ್ತಮುತ್ತಲಿನ ಸಾಹಿತ್ಯ ಪರಿಸರವನ್ನು ದರ್ಶಿಸುವ ಪ್ರಯತ್ನ ಮಾಡಿದ್ದಾರೆ.ಕನ್ನಡ ಭಾಷೆ ಮತ್ತು ಸಾಹಿತ್ಯ ಹಲ್ಮಿಡಿ ಶಾಸನದಿಂದ ಆರಂಭವಾಗಿರಿವಿದು ಸಾಹಿತ್ಯಾಸಕ್ತರಿಗೆ ತಿಳಿದಿರುವ ಸಂಗತಿ. ಹಲ್ಮಿಡಿಶಾಸನದಿಂದಿಡಿದು ಕವಿರಾಜಮಾರ್ಗವನ್ನು ಒಳಗೊಂಡಂತೆ ಪಂಪನ ಕಾಲದತನಕ ರಚಿತವಾಗಿರುವ ಕನ್ನಡಭಾಷೆ ಮತ್ತು ಸಾಹಿತ್ಯ ಬಗೆಗಿನ ಮಾಹಿತಿಯನ್ನು ಸ್ಪಷ್ಟಪಡಿಸುವ ಸಲುವಾಗಿ ಎಲ್.ಬಸವರಾಜು ಅವರು 'ಪಂಪಪೂರ್ವಯುಗ'ಎಂಬ ಕಿರುಹೊತ್ತಗೆಯ ಮೂಲಕ ಆ ಕಾಲದ ಭಾಷಾಸಾಹಿತ್ಯದ ಬಗ್ಗೆ ಹೆಚ್ಚಿನ ಮಾಹಿತಿ ದೊರಕಿಸಿಕೊಟ್ಟಿರುವುದು ಬಹಳ ಉಪಯುಕ್ತವಾಗಿದೆ.ಅವುಗಳ ಸ್ವರೂಪವಿನ್ಯಾಸಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಕೈಗೊಳ್ಳಲಾಗಿದೆ.

ಮುತ್ತಿನ ಹಾರ

# ಪಂಪಪೂರ್ವಯುಗ

ಡಾ॥ ಎಲ್. ಬಸವರಾಜು



## ಪಂಪಪೂರ್ವಯುಗ

ಇದರ ಹೆಸರೇ ಸೂಚಿಸುವಂತೆ ಎಲ್.ಬಸವರಾಜು ಅವರು ಪಂಪನ ಹಿಂದಿನ ಕಾಲದ ಕನ್ನಡಭಾಷಾಸಾಹಿತ್ಯವನ್ನು ದರ್ಶಿಸುವ ಕೃತಿರೂಪವೇ 'ಪಂಪಪೂರ್ವಯುಗ'ಎಂಬ ಕಿರು ಹೊತ್ತಿಗೆಯಾಗಿದೆ. 'ಕವಿರಾಜಮಾರ್ಗ'ದ ಹಾಗೂ ಇತರೆ ಶಾಸನಗಳ ಆಧಾರದ ಮೇಲೆ ಲಭ್ಯವಿರುವ ಅಂದಿನ ಕಾಲದ ಪರಿಸರವನ್ನು ದರ್ಶಿಸುವುದೇ ಈ ಕೃತಿಯ ಮೂಲೋದ್ದೇಶವಾಗಿದೆ. ಎಲ್,ಬಸವರಾಜು ಅವರು ಈ ಕೃತಿಯ ಮೂಲಕ ಪಂಪಪೂರ್ವಯುಗದ ಪರಿಸರವನ್ನು ಸಂಕ್ಷೀಪ್ತವಾಗಿ ದರ್ಶಿಸುವ ಪ್ರಯತ್ನ ಮಾಡಿದ್ದಾರೆ.

ಕನ್ನಡ ಭಾಷೆ ಸಾವಿರಾರು ವರ್ಷಗಳ ಪರಂಪರೆಯನ್ನು ಹೊಂದಿದ್ದರೂ ಅದರ ಅಧಿಕೃತ ದಾಖಲೆಯೆಂದರೆ ಕ್ರಿ.ಶ.೪೫೦ ರ ಹಲ್ಮಿಡಿಶಾಸನ. ಇದನ್ನು ಒಳಗೊಂಡಂತೆ ಕೆಲವು ಪ್ರಮುಖ ಶಾಸನಗಳು, 'ಕವಿರಾಜಮಾರ್ಗ' ಮತ್ತು ಕೆಲವು ಚಂಪೂಕವಿಗಳ ಕಾವ್ಯೋಲ್ಲೇಖಗಳನ್ನು ಆಧಾರವಾಗಿಟ್ಟುಕೊಂಡು ಆ ಕಾಲದ ಸ್ವರೂಪ, ದೃಷ್ಟಿಕೋನಗಳನ್ನು ಪ್ರಮಾಣಿಕವಾಗಿ ತೋರಿಸಲಾಗಿದೆ.'ಕವಿರಾಜಮಾರ್ಗ' ಕನ್ನಡದಲ್ಲಿ ಮೈಲಿಗಲ್ಲಿನಂತಹ ಕೃತಿ. ಇದರಲ್ಲಿ ಕನ್ನಡ ನಾಡು ನುಡಿಯ ಬಗ್ಗೆ ಹಲವಾರು ಮಹತ್ತ್ವದ ವಿಚಾರಗಳು ತಿಳಿಯುತ್ತದೆ. ಅಂದರೆ ಪದ್ಯಗದ್ಯಕವಿಗಳ ಪಟ್ಟಿ, ವ್ಯಾಕರಣಾಂಶ, ಛಂದಸ್ಸಂಬಂಧೀ ವಿಷಯಗಳು, ಗಡಿವಿಚಾರಗಳು, ನಾಡಿನ ಜನರ ವ್ಯಕ್ತಿತ್ವ-ಇತರ ಕೆಲವು ಅಗತ್ಯ ಮಾಹಿತಿಗಳು 'ಕವಿರಾಜಮಾರ್ಗ'ದಿಂದ ಪ್ರಾಪ್ತವಾಗುತ್ತದೆ. ಆದರೆ ಇಂತಹ ಮಾಹಿತಿಗಳು ಕವಿಚರಿತ್ರೆಯಲ್ಲಿ ದಾಖಲಾಗಿವೆಯೇ ಹೊರೆತು ಅವುಗಳನ್ನು ಹೊರತೆಗೆಯುವ ಪ್ರಯತ್ನಗಳು ಇನ್ನೂ ತೃಪ್ತಿಕರವಾಗಿ ನಡೆದಿಲ್ಲ.

ಹೀಗೆ ಪಂಪಪೂರ್ವಯುಗದ ಬಗ್ಗೆ ಅಜ್ಞಾತವಾಗಿರುವ ವಿಚಾರಗಳು ಎಲ್ಲ ಸಾಹಿತ್ಯಾಸಕ್ತರಿಗೂ ಕುತೂಹಲಕಾರಿ ಸಂಗತಿಗಳೇ ಸರಿ. ಈ ಸಂಗತಿಯನ್ನರಿತ ಎಲ್.ಬಸವರಾಜು ಅವರು "ಹೀಗೆ ನಮ್ಮ ಮಹಾಕವಿಗಳೂ ಕವಿಚಕ್ರವರ್ತಿಗಳೂ ಅನ್ಯರನ್ನುಗಣನೆಗೆ ತಾರದ ಹಮ್ಮಿನವರಾಗಿದ್ದುದರಿಂದಲೇ ಕನ್ನಡಸಾಹಿತ್ಯಚರಿತ್ರೆಯ ಈ ಘಟ್ಟದಲ್ಲಿ ಕೆಲವು ಶೂನ್ಯಾವರ್ತಗಳು ಏರ್ಪಟ್ಟವು ಎನಿಸುತ್ತದೆ"[೧] ಎನ್ನುತ್ತಾರೆ. ಆದರೆ ಪಂಪಪೂರ್ವಯುಗದ ಕೆಲವು ಕಾವ್ಯಗಳು ಸಮಗ್ರವಾಗಿ ನಮಗೆ ಲಭ್ಯವಿರದಿದ್ದರೂ, ಆ ಕಾವ್ಯಗಳಲ್ಲಿನ ಹಲವು ಉಕ್ತಿಗಳು ಕೆಲವು ವ್ಯಾಕರಣಗ್ರಂಥಗಳಲ್ಲಿ ಕಾವ್ಯಲಕ್ಷಣಗ್ರಂಥಗಳಲ್ಲಿ ಮತ್ತು ಕಾವ್ಯಸಂಕಲನಗ್ರಂಥಗಳಲ್ಲಿ ಉಲ್ಲೇಖಿತವಾಗಿವೆ. ಆದರೂ ಆಯಾ ಉಕ್ತಿಗಳಡಿಯಲ್ಲಿ ಆಯಾ ಕವಿಯ ಅಥವಾ ಕಾವ್ಯ ನಾಮಧೇಯದ ನಿರ್ದೇಶನ ಮಾಡಿರುವ ಸಂದರ್ಭಗಳಲ್ಲಿ ಮಾತ್ರ ಅವು ನಮ್ಮ ಕೈಗೆ ಸಿಕ್ಕಿ, ಉಳಿದಂತೆ ಬಹುಪಾಲು ಅನಾಮಿಕವಾಗಿ ನಮ್ಮತ್ತ ಕೆಣಕುದೃಷ್ಟಿಯನ್ನು ಬೀರುತ್ತ ಕಣ್ಣಾಮುಚ್ಚಾಲೆಯಾಡುತ್ತಲೇ ಇವೆ. ಈ ಎಲ್ಲ ಕೃತಿಗಳು ಗತದಲ್ಲಿ ಹೂತು ಹೋಗಿದ್ದರೂ,ಈ ಎಲ್ಲದರ ಬಗ್ಗೆ ಮಾಹಿತಿ ನೀಡುವ ಕನ್ನಡದ ಅನರ್ಘ್ಯರತ್ನ ಕವರಾಜಮಾರ್ಗ ಏನೂ ಮುಕ್ಕಾಗದೆ ನಮ್ಮ ಕೈಸೇರಿರುವುದು ನಮ್ಮ ಭಾಗ್ಯ ಎನ್ನುತ್ತಾರೆ. ಇವುಗಳ ಜೊತೆಗೆ 'ಕವಿರಾಜಮಾರ್ಗ'ಕ್ಕಿಂತ

---

೧. ಎಲ್.ಬಸವರಾಜು, **ಪಂಪಪೂರ್ವಯುಗ** ಪೀಠಿಕೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪ್ರಥಮ ಮುದ್ರಣ ೧೯೯೬, ಪುಟ-೮

ಪ್ರಾಚೀನವಾದ ಮತ್ತು ಸಾಂದರ್ಭಿಕವೆನಿಸುವ ಕೆಲವು ಕನ್ನಡ ಶಾಸನಗಳನ್ನು ಆಯ್ದು ಸರಳಾನುವಾದ ಸಹಿತವಾಗಿ ಈ ಕೃತಿಯಲ್ಲಿ ಕೊಡಲಾಗಿದೆ.

ಎಲ್,ಬಸವರಾಜು ಅವರು ಪ್ರಸ್ತುತ ಕೃತಿಯಲ್ಲಿ ಹಲ್ಮಿಡಿಶಾಸನದಿಂದಿಡಿದು ಪಂಪಪೂರ್ವಕವಿಯಾದ ಗುಣವರ್ಮನ ಕೃತಿಯವರೆಗೆ ದೊರೆಯುವ ಕೆಲವು ಸಾಂದರ್ಭಿಕ ಮಾಹಿತಿಗಳನ್ನು ಕಲೆಹಾಕಿ,ಅವುಗಳನ್ನು ಪ್ರತ್ಯೇಕವಾಗಿ,ಕೊಡುವುದರೊಂದಿಗೆ,ಅವುಗಳ ಅರ್ಥಕ್ಕನುಗುಣವಾಗಿ ಓದಲು ಸುಲಭವಾಗುವಂತೆ ಸರಳವಾಗಿ ನಿರೂಪಿಸಲಾಗಿದೆ.ಅಲ್ಲಲ್ಲಿ ಕಾವ್ಯೋದ್ಧೇಶ ಸ್ಪಷ್ಟವಾಗಿ ಅರಿವಾಗುವಂತೆ ಉಪಶೀರ್ಷಿಕೆಗಳನ್ನು ನೀಡಲಾಗಿದೆ.ಇವುಗಳಲ್ಲದೆ ಶಾಸನಗಳನ್ನು ಓದಲು ಸುಲಭವಾಗುವಂತೆ ಬಿಡಿಸಿರುವುದಲ್ಲದೆ, ಅವುಗಳಸಾರವನ್ನು ಹೊಸಗನ್ನಡದಲ್ಲಿ ಸ್ಪಷ್ಟವಾಗಿ ವಿವರಿಸಲಾಗಿದೆ. ಕೃತಿಯಲ್ಲಿ ಪ್ರಮುಖವಾದ (ಸಾಹಿತ್ಯ ದೃಷ್ಟಿಯಿಂದ) ಆರು ಶಾಸನಗಳನ್ನು ಪಟ್ಟಿಮಾಡಲಾಗಿದೆ.ಅವು ಕ್ರಮವಾಗಿ-

* ಹಲ್ಮಿಡಿ ಶಾಸನ (ಕ್ರಿ.ಶ.ಸು.೪೫೦)
* ತಮ್ಮಟಕಲ್ಲು ಶಾಸನ (ಕ್ರಿ.ಶ.ಸು ೫೦೦)
* ಕಮ್ಮ್ಲಿಶಾಸನ (ಕ್ರಿ,ಶ.೬ನೇ ಶತಮಾನ)
* ಬಾದಾಮಿ ಶಾಸನ(ಕ್ರಿ.ಶ೭೦೦)
* ಮಾವಳಿ ಶಾಸನ(ಕ್ರಿ.ಶ೮೦೦)
* ಬೇಗೂರು ಶಾಸನ(ಕ್ರಿ.ಶ ೮೯೦)

ಎಲ್.ಬಸವರಾಜು ಅವರು ಹೀಗೆ ಮೇಲಿನ ಆರು ಶಾಸನಗಳನ್ನು ಪಟ್ಟಿಹಾಕಿ,ಅವುಗಳಲಿರುವ ಸ್ಥಳವನ್ನು ಶೀರ್ಷಿಕೆಯಲ್ಲಿಯೇ ಸ್ಪಷ್ಟವಾಗಿ ತಿಳಿಸಿದ್ದಾರೆ.ಕೆಲವು ಭಾಗಗಲ ಮೂಲಕ ಕೃತಿಯ ಸ್ವರೂಪವನ್ನು ಮತ್ತಷ್ಟು ಸ್ಪಷ್ಟಪಡಿಸಿಕೊಳ್ಳಬಹುದು.

(ಆಯ್ದ ಕೆಲವು ಭಾಗಗಳನ್ನು ಮಾತ್ರ ನೀಡಲಾಗಿದೆ)

ಉದಾ:೧

ಬೇಲೂರು ಹೋಬಳಿ ಹಲ್ಮಿಡಿ ಗ್ರಾಮದಲ್ಲಿ ವೀರಭದ್ರ
ದೇವಸ್ಥಾನದ ಮುಂದೆ ನಟ್ಟಿದ್ದ
ಹಲ್ಮಿಡಿ ಕಲ್ಲುಶಾಸನ (ಕ್ರಿ.ಶ.ಸು.೪೫೦)

ಜಯಶ್ರೀ ಪರಿಷ್ವಙ್ಗಶ್ಯಾಙ್ಗ(ಮ್ಯಾನತಿ) ರಚ್ಯುತಃ
ದಾನವಾಕ್ಷ್ಣೋಯುರ್ಗಾನ್ತಾಗ್ನಿಃ(ಶಿಷ್ಟಾನಾನ್ತು) ಸುದಶನಃ
*ನಮಃ ಶ್ರೀಮತ್ ಕದಂಬಪನ್ ತ್ಯಾಗಸಂಪನ್ನನ್
ಕಂಭೋರನಾ ಅರಿ ಕಕುಸ್ಥಭಟ್ಟೋರನ್ ಆಳೆ,
ನರದಾವಿ[ಳೆ] ನಾಡುಳ್

ಮೃಗೇಶ-ನಾಗೇಂದ್ರಾಭೀಳರ್
ಭಟಹರಪ್ಪೊ(೯)ರ್
ಶ್ರೀ ಮೃಗೇಶ-ನಾಗಾಹ್ವಯರಿರ್ವರ್-

*ಸ್ಥೂಲ ಸರಳಾನುವಾದ: ನಮಸ್ಕಾರ ಶ್ರೀಮಾನ್ ಕದಂಬವನೂ ತ್ಯಾಗಸಂಪನ್ನನೂ ಕಲಭೋರನ ಶತ್ರು(ವೂ ಆದ)ಕಕುಸ್ಥಭಟ್ಟೋರನು ಆಳಲು,ನರಿದಾವಿಳೆ ನಾಡಿನಲ್ಲಿ ಮೃಗೇಶ (ಮತ್ತು) ನಾಗೇಂದ್ರ(ರಂತೆ)ಭಯಂಕರ ಭಟಹರ(=ಯೋಧ)ರಾದ ಶ್ರೀಮೃಗೇಶ(ಮತ್ತು)ನಾಗವೆಂಬ ಇಬ್ಬರು-

ಉದಾ:೨

ಬಿಜಾಪುರ ಜಿಲ್ಲೆ,ಬಾದಾಮಿ(ತಾಲೂಕು)
ಬಾದಾಮಿಯ ಕಪ್ಪೆ ಅರಭಟ್ಟನ ಶಾಸನ
ಕಾಲ: ಕ್ರಿ,ಶ.ಸು ೭೦೦

ವರಂ ತೇಜಸ್ವಿನೋ ಮೃತ್ಯುಃ ನ ತು ಮಾನಾದ ಖಂಡನಮ್।
ಮೃತ್ಯುಸ್ತತ್ ಕ್ಷಣಿಕೋ ದುಃಖಂ ಮಾನಭಂಗಂ ದಿನೇ ದಿನೇ॥
ಸಾಧುಗೆ ಸಾಧು,ಮಾಧುರ್ಯ್ಯಂಗೆ ಮಾಧುರ್ಯ್ಯಂ
ಭಾದಿಪ್ಪ ಕಲಿಗೆ ಕಲಿಯುಗವಿೀಪರೀತನ್-
ಮಾಧವನಿತನ್ ಪೆಱನಲ್ಲ.

ಸರಳಾನುವಾದ: ತೇಜಸ್ವಿಗಳಿಗೆ ಶ್ರೇಷ್ಠವಾದ್ದು ಸಾವೇ ಹೊರತು ಮಾನಭಂಗವಲ್ಲ.ಸಾವು ಒಂದು ಕ್ಷಣದ್ದು,ಮಾನಭಂಗ ವಾದರೋ ದಿನದಿನವೂ ಸಾಯಿಸುತ್ತಲೇ ಇರುವುದು.
(ಕಪ್ಪೆ ಅರಭಟ್ಟನು)ಮೃದುವಾದವನಿಗೆ ಮೃದು,ಮಹಾಘಟ್ಟಿಗನಿಗೆ ಮಹಾಘಟ್ಟಿಗ,ಬಾಧಿಸುವ ಕಲಿಗೆ ಕಲಿಯುಗದ(ಕೊನೆಗೆಬರುವ)ಕಲ್ಕಿ(ಲೋಕ ಸಂರಕ್ಷಕನು ರಾಕ್ಷಸ ಸಂಹಾರಿಯೂ ಆದ)ಮಾಧವ(ಶ್ರೀವಿಷ್ಣು)ಈತನು ಅನ್ಯನಲ್ಲ.

ಹೀಗೆ ಎಲ್.ಬಸವರಾಜು ಅವರು ತಮ್ಮ ಕೃತಿಯಲ್ಲಿ ಆರು ಶಾಸನಗಳನ್ನು ಇದೇ ಮಾದರಿಯಲ್ಲಿ ಕೊಟ್ಟಿದ್ದಾರೆ.ಶಾಸನಗಳ ಬಗ್ಗೆ ಸರಳಸ್ವರೂಪದಲ್ಲಿ ವಿಶ್ಲೇಷಿಸಿದ ತರುವಾಯ, ಕವಿರಾಜಮಾರ್ಗವನ್ನು ಕೈಗೆತ್ತಿಕೊಂಡಿದ್ದಾರೆ.ಕಾಲನಿರ್ದೇಶದೊಂದಿಗೆ ಕೃತಿಯಲ್ಲಿನ ಬಹುಮುಖ್ಯ ಭಾಗಗಳ- ನಿರ್ದಿಷ್ಟಸಂಖ್ಯಾಸೂಚಿಯೊಂದಿಗೆ ಹಾಗೂ ಕೆಲವು ಉಪಶೀರ್ಷಿಕೆಗಳ ಮೂಲಕ ತಿಳಿಸಲಾಗಿದೆ.ಜೊತೆಗೆ ಕೃತಿಯಲ್ಲಿರುವ ಕೆಲವು ವಿಶೇಷ ವಿಷಯಗಳನ್ನು ಪಟ್ಟಿಹಾಕಲಾಗಿದೆ. ಇವುಗಳಲ್ಲಿ ವಿಶೇಷವಾದ ಅಂಶಗಳೇನಿದ್ದರೂ,ಕೃತಿಯಾಂತರ್ಯದ ವಿಷಯವನ್ನೇ ಸ್ಪಷ್ಟವಾಗಿ ನಿರ್ದಿಷ್ಟವಾದ ವಿಷಯದೊಳಗೆ ಗುರುತಿಸಿ, ಆ ವಿಷಯದಲ್ಲಿ ಅವುಗಳನ್ನು ಅಳವಡಿಸಿ ಪಟ್ಟಿಮಾಡಿರುವುದು ಕೃತಿಯ ಮೌಲ್ಯವನ್ನು ಹೆಚ್ಚಿಸಿದೆ.ಅಂದರೆ ಕವಿ-ಜನ.ಕನ್ನಡ ಸಂಸ್ಕೃತ ಪದ್ಯಕಾವ್ಯಗಳು,ಕನ್ನಡದಲ್ಲಿ ಯತಿ ಮತ್ತು ಪ್ರಾಸ,ಕನ್ನಡದಲ್ಲಿ ದಕ್ಷಿಣೋತ್ತರ ಮಾರ್ಗವಿಚಾರ.... ಹೀಗೆ 'ಕವಿರಾಜಮಾರ್ಗ'ದ ೩ ಪರಿಚ್ಛೇದಗಳನ್ನು ಪೂರ್ಣವಾಗಿ ಆಯಾ ವಿಷಯಗಳಾಗಿ ವಿಂಗಡಿಸಿ ತಿಳಿಸಲಾಗಿದೆ.

‘ಕವಿರಾಜಮಾರ್ಗ’ದಲ್ಲಿನ ವಿಷಯಗಳನ್ನು ಸವಿವರವಾಗಿ ಹೊರಚೆಲ್ಲಿದ ತರುವಾಯ ಎಲ್.ಬಸವರಾಜು ಅವರು ಅಸಗ ಕವಿಯ ವಿಷಯವನ್ನು ತಿಳಿಸಲು ಕಾರ್ಯಪ್ರವೃತ್ತರಾಗುತ್ತಾರೆ. ಅಸಗನ ಬಗ್ಗೆ ಈವರೆಗೆ ಹಲವೆಡೆ ಇದ್ದ ಪದ್ಯಗಳನ್ನು ಸಂಗ್ರಹಿಸಿ ಒಂದೆಡೆ ಕೊಡುತ್ತಾರೆ. ಜೊತೆಗೆ ಅಸಗನ ಕೃತಿಯ ಬಗ್ಗೆ‘ಕಾವ್ಯಾವಲೋಕನ’ದಲ್ಲಿ ಉಪಲಬ್ದವಿರುವ ಕೆಲವು ಪದ್ಯಗಳು ಅಸಗನದೆಂದು ಕೊಂಡಿರುವ ಕಾರಣ ‘ಕಾವ್ಯಾವಲೋಕನ’ದಿಂದ ಹಲವು ಪದ್ಯಗಳಲ್ಲಿ ಕೆಲವನ್ನು ಕುತೂಹಲಕ್ಕಾಗಿ ಸಂಕಲನಮಾಡಿ ಕೊಡಲಾಗಿದೆಯೇ ಹೊರತು–ಅಧಿಕೃತವೆಂದಲ್ಲ ಎಂದು ತಿಳಿಸಿದ್ದಾರೆ. ಅಸಗನ ‘ಕರ್ಣಾಟ ಕುಮಾರಸಂಭವ’ದಿಂದ ೬ ಪದ್ಯಗಳನ್ನು ಸಂಕಲಿಸಿದ್ಧಾರೆ.

ಅನಂತರ ಎಲ್.ಬಸವರಾಜು ಅವರು ತಮ್ಮ ಪುಸ್ತಿಕೆ ಕೊನೆಯಲ್ಲಿ ಒಂದನೇ ಗುಣವರ್ಮನ ವಿಷಯವನ್ನು ಪ್ರಸ್ತಾಪಿಸುತ್ತಾರೆ. ವಿವಿಧ ಮೂಲಗಳಿಂದ ಒಂದನೆಯ ಗುಣವರ್ಮನ ಬಗೆಗಿನ ವಿಚಾರಗಳನ್ನು ಕಲೆಹಾಕಿ,ಆತನ ವೈಯಕ್ತಿಕ ಜೀವನವಿಚಾರವನ್ನು ಕಟ್ಟಿಕೊಡುತ್ತಾರೆ.ಅಲ್ಲದೆ ಆತನ ಕೃತಿಯಾದ‘ಶೂದ್ರಕ’ ಎಂಬ ಚಂಪೂಕಾವ್ಯದಲ್ಲಿ ವಿವಿಧ ಪದ್ಯಗಳನ್ನು ನಿದಿಷ್ಟ ವಿಷಯವಾಗಿ ವಿಂಗಡಿಸಿ,ಅವುಗಳನ್ನು ಉಪಶೀರ್ಷಿಕೆಯ ಮೂಲಕ ನಿರ್ದೇಶಿಸಿ ಪಟ್ಟಿಮಾಡಲಾಗಿದೆ. ಅಲ್ಲದೆ ಗುಣವರ್ಮನ ‘ಹರಿವಂಶ’ದ ೩ ಪದ್ಯಗಳನ್ನು ನೀಡಲಾಗಿದೆ.ಇವುಗಳನ್ನು ನಿರ್ದೇಶಿಸಲು ಪರಮಾಧಾರವಾಗಿ ಕಾವ್ಯಸಾರ ಹಾಗೂ ಕಾವ್ಯಾಲೋಕನ ಗ್ರಂಥಗಳ ಯಥೋಚಿತವಾಗಿ ಬಳಸಿಕೊಳ್ಳಲಾಗಿದೆ.

ಅಂತಿಮವಾಗಿ ‘ಅರ್ಥ’ಎಂಬ ಶೀರ್ಷಿಕೆಯಡಿ ಕವಿರಾಜಮಾರ್ಗದಲ್ಲಿನ ಕೆಲವು ಕಠಿಣಪದಗಳಿಗೆ ಅರ್ಥಕಲ್ಪಿಸಲಾಗಿದೆ.ಪದದ ನಿರ್ದಿಷ್ಟ ಪರಿಚ್ಛೇದ,ಪದ್ಯದ ಸಂಖ್ಯಾಸೂಚಿಯೊಂದಿಗೆ ೩ ಪರಿಚ್ಛೇದದಲ್ಲಿನ ಕಠಿಣಪದಗಳಿಗೆ ದಿನಬಳಕೆಯ ಸಾಮಾನ್ಯ ಅರ್ಥ ನೀಡಲಾಗಿದೆ.ಹೀಗೆ ಎಲ್.ಬಸವರಾಜು ಅವರು ಈವರೆಗೆ ಅಜ್ಞಾತವಾಗಿದ್ದ ಪಂಪಪೂರ್ವಯುಗದ ಹಲಕೆಲವು ವಿಚಾರಗಳನ್ನು ಒಂದೆಡೆ ಸಂಕ್ಷಿಪ್ತವಾಗಿ ಕಲೆಹಾಕಿ ಕೃತಿರೂಪದಲ್ಲಿ ಹೊರತಂದಿರುವುದು ತುಂಬ ಉಪಯುಕ್ತವಾಗಿದೆ.

ಸರಳವಿನ್ಯಾಸದ ಮೂಲಕ ಶಾಸನಗಳ ಪದಗಳನ್ನು ಬಿಡಿಸಿ,ಅವುಗಳ ಅರ್ಥವನ್ನು ಸರಳಾನುವಾದದಲ್ಲಿ ನೀಡಿರುವುದು ಕನ್ನಡ ಸಂಶೋಧನಾಕ್ಷೇತ್ರದಲ್ಲಿ ಒಂದು ಮಹತ್ತ್ವದ ಹೆಜ್ಜೆಯಾಗಿದೆ. ಇತರ ಸಂಶೋಧನಾಸಕ್ತರಿಗೆ ಮಾದರಿಯಾಗಿದೆ. ಒಟ್ಟಾರೆ ಎಲ್.ಬಸವರಾಜು ಅವರ ಈ ಕಾರ್ಯ ಪಂಪನ ಹಿಂದಿನಕಾಲದ ಪರಿಸರವನ್ನು ಅನಾವರಣಗೊಳಿಸುವಲ್ಲಿ ಯಶಸ್ವಿಯಾಗಿದೆ.

## ಒಟ್ಟುನೋಟ

ಸಮಕಾಲೀನ ಸಮಾಜದ ಶ್ರೇಷ್ಠ ವಿದ್ವಾಂಸರಾದ ಎಲ್.ಬಸವರಾಜು ಅವರು ಹಳಗನ್ನಡ ಸಾಹಿತ್ಯದ ಬಗ್ಗೆ ನಡೆಸಿರುವ ಸಂಶೋಧನೆಯನ್ನು ಈವರೆಗೆ ಚರ್ಚಿಸಿದ್ದೇವೆ.ಹಳಗನ್ನಡವೆಂದರೆ ಬೆಚ್ಚಿಬೀಳುವ ಪ್ರಸ್ತುತ ಸಮಯದಲ್ಲಿ, ಪಂಪರನ್ನರ ಕಾವ್ಯಗಳನ್ನು ಆಮೂಲಾಗ್ರವಾಗಿ ಪರಿಶೋಧಿಸಿ ಪರಿಷ್ಕರಿಸಿ,ಅವಗಳನ್ನು ಸರಳಾನುವಾದ ಹಾಗೂ ಛಾಯಾನುವಾದ ಮಾಡುವ ಮೂಲಕ ಪಂಪರನ್ನರ ಕೃತಿಗಳನ್ನು ಜನಸಾಮಾನ್ಯರು ಸುಲಭವಾಗಿ ಓದಿ ಅರ್ಥಮಾಡಿಕೊಳ್ಳುವಂತೆ ಮಾಡಿದ್ದಾರೆ.ಎಲ್.ಬಸವರಾಜು ಅವರು ಈ ಸರಳಾನುವಾದ ಹಾಗೂ ಛಾಯಾನುವಾದ ಕನ್ನಡಸಾಹಿತ್ಯ ಕ್ಷೇತ್ರದಲ್ಲಿ ತೀರ ಹೊಸವು. ಈವರೆಗೆ ಹಳಗನ್ನಡದಂತಹ ಕೃತಿಗಳಿಗೆ ಟೀಕು ಅಥವಾ ವೃತ್ತಿರಚಿಸುವ ಪರಿಪಾಠ ಮಾತ್ರವೇ ಇತ್ತು. ಆದರೆ ಎಲ್.ಬಸವರಾಜು ಅವರು ಸಾಹಿತ್ಯ ಕೇವಲ ಕೆಲವೇ ಜನರ ಸ್ವತ್ತಾಗಿರಬಾರದೆಂದು, ಅದು ಜನಸಾಮಾನ್ಯರ ಕರಕಮಲದಲ್ಲಿ ಸ್ಥಾನಪಡೆಯಬೇಕೆಂದು ಪಂಪನ ಎರಡೂ ಕೃತಿಗಳನ್ನು– ಅಂದರೆ 'ಆದಿಪುರಾಣಂ' ಹಾಗೂ ' ವಿಕ್ರಮಾರ್ಜುನ ವಿಜಯ'ಕೃತಿಗಳನ್ನು – ಕ್ರಮವಾಗಿ 'ಪಂಪನ ಸರಳ ಆದಿಪುರಾಣ' ಹಾಗೂ 'ಸರಳ ಪಂಪಭಾರತ'ಎಂತಲೂ,ಅಂತೆಯೇ 'ಪಂಪನ ಆದಿಪುರಾಣ ಕಥಾಮೃತ' ಹಾಗೂ 'ಪಂಪನ ಸಮಸ್ತಭಾರತ ಕಥಾಮೃತ' ಎಂಬ ಕೃತಿಗಳನ್ನು ರಚಿಸಿದ್ದಾರೆ.ಎಲ್.ಬಸವರಾಜು ಅವರ ಈ ಕೃತಿಗಳು ಜನಪರ ಕಾಳಜಿಯ ದ್ಯೋತಕವೇ ಸರಿ.

ಎಲ್.ಬಸವರಾಜು ಅವರು ಸಾಮಾನ್ಯ ಓದುಗರನ್ನು ಮನದಲ್ಲಿಟ್ಟುಕೊಂಡು ಕೃತಿರಚಿಸಿರುವುದು ಈಗಾಗಲೇ ತಿಳಿದಿರುವ ಸಂಗತಿ.ಆದರೆ ಸಾಂಪ್ರಾದಾಯಿಕ ವಿದ್ವಾಂಸರು ಅವರ ವಿನ್ಯಾಸದ ಬಗ್ಗೆ ಆಕ್ಷೇಪ ಎತ್ತಿರುವ ಪ್ರಸಂಗಗಳೂ ಇವೆ. ಇದಕ್ಕೆ ಕಾರಣ,ಎಲ್.ಬಸವರಾಜು ಅವರು ಓದುಗರಿಗೆ ಸುಲಭವಾಗಲೆಂದು ಅರ್ಥಸ್ಪಷ್ಟತೆಗಾಗಿ ಬಿಡಿಸಿ ಕೊಟ್ಟಿರುವಲ್ಲಿ ಮೂಲದ ಛಂದೋವಿನ್ಯಾಸಕ್ಕೆ ಭಂಗಬಂದಿದೆ ಎಂಬುದು ಅವರ ವಾದ. ಆದರೆ ಎಲ್.ಬಸವರಾಜು ಇದಕ್ಕೆ ಕೊಡುವ ಒಂದು ಉಪಮೆ ಸೂಕ್ತವೆನಿಸುತ್ತದೆ. ಅದು ತಳಿಗೆಯಲ್ಲಿ ದುಂಡಾಗಿದ್ದ ಹೋಳಿಗೆಯನ್ನು ಹಾಗೆಯೇ ಬಿಟ್ಟರೆ ಹೋಳಿಗೆಯನ್ನು ಸವಿಯುವ ಭಾಗ್ಯವೇಗೆ?. ಆದರೆ ಎಲ್.ಬಸವರಾಜು ಅರ್ಥಸ್ಪಷ್ಟತೆಗಾಗಿ ಪಾದಗಳನ್ನು ಬಿಡಿಸಿದ್ದಾರೆಯೇ ಹೊರತು ಮೂಲ ಛಂದಸ್ಸಿಗೆ ಭಂಗತರಬೇಕು ಎಂಬ ಉದ್ದೇಶದಿಂದಲ್ಲ ಎಂಬುದನ್ನು ಮರೆಯಬಾರದು. ಅಲ್ಲದೆ ಅವರೇ ಕೃತಿಯಲ್ಲಿ ನೀಡಿರುವ ಉಪರಿ ಉಪರಿಗೀಟುಗಳಿಂದ ಮೂಲದ ಪಾದಗಳನ್ನು ತಿಳಿಯಬಹುದು. ಇದೊಂದು ಕನ್ನಡಸಂಶೋಧನ ಕ್ಷೇತ್ರದಲ್ಲಿಯೇ ಹೊಸ ಹಾಗೂ ವಿಶಿಷ್ಟವಾದ ಹಾದಿಯಾಗಿದೆ. ಇದು ಪ್ರಸ್ತುತ ಕಾಲಕ್ಕೆ ಅಗತ್ಯದೊಂದಿಗೆ ಅನಿವಾರ್ಯವೂ ಹೌದು. ಹಳಗನ್ನಡ ಓದಬೇಕಾದ ವಿದ್ಯಾರ್ಥಿಗಳ ಪಾಡು ಆಗಿರಲಿ, ಬೋಧಿಸಬೇಕಾದ ಅಧ್ಯಾಪಕರಿಗೆ ಇವು ಮಾರ್ಗದರ್ಶಿ ಕೃತಿಗಳಾಗಿವೆ ಎಂಬುದರಲ್ಲಿ ಆಶ್ಚರ್ಯವಿಲ್ಲ.

ಇನ್ನು ಎಲ್.ಬಸವರಾಜು ಅವರ ಗ್ರಂಥಸಂಪಾದನಾ ಕ್ಷೇತ್ರವನ್ನು ನೋಡಿದರೆ, ಇತರ ಸಮಕಾಲೀನ ಹಾಗೂ ಹಿರಿಯ ವಿದ್ವಾಂಸರಿಗೆ ಆಶ್ಚರ್ಯವೆನಿಸುತ್ತದೆ. ಹಳಗನ್ನಡಸಾಹಿತ್ಯ ಸಂಬಂಧಿತವಾಗಿ ಅವರು ಸಂಪಾದಿಸಿರುವ 'ಪಂಪನ ಆದಿಪುರಾಣ', ಕೇಶಿರಾಜನ 'ಶಬ್ದಮಣಿದರ್ಪಣಂ, ಹಾಗೂ 'ಕನ್ನಡ ಛಂದಸ್ಸಂಪುಟ'– ಕನ್ನಡಸಾಹಿತ್ಯದಲ್ಲಿ ಪ್ರಮಾಣಭೂತ ಕೃತಿಗಳಾಗಿರುವುದು ಅವುಗಳ ಮೌಲ್ಯಕ್ಕೆ ಹಿಡಿದ ಕನ್ನಡಿ. ಯಾವುದೇ ಕೃತಿಯ ಗ್ರಂಥಸಂಪಾದನೆಯಲ್ಲಿ ಎಲ್.ಬಸವರಾಜು ಅವರು ಬಹುಸಂಖ್ಯೆಯ ಹಸ್ತಪ್ರತಿ ಹಾಗೂ ಇತರ

ಪ್ರಾಮಾಣಿಕ ಆಧಾರಗಳ ಮೂಲಕ ಸ್ಪಷ್ಟವಾಗಿ ತೀರ್ಮಾನಿಸಿ, ಅವುಗಳಿಗೆ ತಕ್ಕ ಸಾಕ್ಷ್ಯ ಆಧಾರ ಸಮೇತವಾಗಿ ಮೂಲಪಠ್ಯವನ್ನು ಪರಿಷ್ಕರಿಸುತ್ತಾರೆ. ಇದಕ್ಕೆ ಆಳವಾದ ವಿದ್ವತ್ತು, ಸತತ ಅಧ್ಯಯನ, ಸಹನಶೀಲ ಪರಿಷ್ಕರಣೆ, ತಾಳ್ಮೆ, ಪಾಂಡಿತ್ಯ ಅಗತ್ಯ. ಎಲ್.ಬಸವರಾಜು ಅವರ ಗ್ರಂಥಸಂಪಾದನೆಯಲ್ಲಿ ಈ ಎಲ್ಲಾ ಗುಣಗಳು ಮೂರ್ತರೂಪ ತಳೆದು ಕೃತಿರುಪ ತಳೆಯುತ್ತದೆ. ಆದುದರಿಂದಲೇ ಎಲ್.ಬಸವರಾಜು ಅವರ ಗ್ರಂಥಸಂಪಾದನೆಯು ಇತರರ ಸಂಪಾದನೆಗಿಂತ ಭಿನ್ನವಾಗಿರುತ್ತದೆ. ಇದರಿಂದಲೇ ಅವರು ಆಧುನಿಕ ಕನ್ನಡಸಾಹಿತ್ಯದಲ್ಲಿ ತಮ್ಮ ಸ್ಥಾನವನ್ನು ಭದ್ರಪಡಿಸಿದ್ದಾರೆ. ಗ್ರಂಥಸಂಪಾದನಾ ಕ್ಷೇತ್ರದಲ್ಲಿ ಅವರು ಅನುಸರಿಸುವ ವಿಧಾನ ಅವರದ್ದೇ ಆಗಿದ್ದು, ತನ್ನ ವಿಶಿಷ್ಟವಾದ ಇತರರಿಗೆ ಮಾದರಿಯಾಗಿದೆ ಎನ್ನುವುದು ಅತಿಶಯೋಕ್ತಿಯಲ್ಲ.

ಅಂತಿಮವಾಗಿ ಎಲ್.ಬಸವರಾಜು ಅವರು ಈವರೆಗೆ ಅಜ್ಞಾತವಾಗಿದ್ದ 'ಕವಿರಾಜಮಾರ್ಗ'ದ ಸುತ್ತಮುತ್ತಲಿನ ಪರಿಸರವನ್ನು ಕಟ್ಟಿಕೊಡುವ ಪ್ರಯತ್ನ ನಿಜವಾಗಿಯೂ ಸ್ತುತ್ಯರ್ಹವಾದುದು. ಕನ್ನಡಸಾಹಿತ್ಯದಲ್ಲಿ ಹಲವಾರು ಸಂಶೋಧನೆ,ವಿಮರ್ಶೆಗಳು ಹರಿದುಬಂದಿದ್ದರೂ ಪಂಪಪೂರ್ವಯುಗ ಸಾಹಿತ್ಯದ ಬಗ್ಗೆ ಬೆಳಕು ಚೆಲ್ಲುವ ಕಾರ್ಯ ಈವರೆಗೆ ನಡೆದಿರಲಿಲ್ಲ. ಅವೆಲ್ಲಾವನ್ನು ಒಟ್ಟಾಗಿ ಸೇರಿಸಿ ಆ ಕಾಲದ ಸ್ಥೂಲದರ್ಶನ ಮಾಡಿಸಿರುವುದು ಹೆಚ್ಚು ಉಪಯುಕ್ತವಾಗಿದೆ.ಅಲ್ಲದೆ ಕೆಲವು ಪ್ರಮುಖವಿಚಾರಗಳನ್ನು ಪಟ್ಟಿಮಾಡಿ, ಅವುಗಳನ್ನು ಒದಲು ಅನುವಾಗುವಂತೆ ಸರಳಾನುವಾದದ ಮೂಲಕ ಶಾಸನಸಾರವನ್ನು ಒದಗಿಸಿಕೊಟ್ಟಿರುವುದು ಶಾಸನಶಾಸ್ತ್ರದಲ್ಲಿ ಹೊಸಹೆಜ್ಜೆಯೇ ಸರಿ.

ಹೀಗೆ ಎಲ್.ಬಸವರಾಜು ಅವರು ಯಾವುದೇ ಕಾರ್ಯಕೈಗೊಂಡರೂ ಅದು ಶಾಸ್ತ್ರೀಯವಾಗಿ, ತನ್ನ ವಿಶಿಷ್ಟನೆಲೆಯಿಂದ ಇತರರಿಗೆ ಮಾದರಿಯಾಗಿರುವುದು ವಾಸ್ತವದ ಸಂಗತಿ. ಇವರ ಈ ಕಾರ್ಯವೈಖರಿಯನ್ನು ಸ್ಪಷ್ಟವಾಗಿ ಅರ್ಥೈಸಿಕೊಂಡು ಅಧ್ಯಯನ ನಡೆಸಬೇಕಾದ ಅಗತ್ಯವಿದೆ.

## ಆಕರಗ್ರಂಥಗಳು

೧) ಕನ್ನಡ ಛಂದಸ್ಸಂಪುಟ – ಸಂ: ಎಲ್.ಬಸವರಾಜು,ಗೀತಾಬುಕ್‌ಹೌಸ್,ಮೈಸೂರು
ಮೊದಲ ಮುದ್ರಣ

೨) ಕೇಶಿರಾಜನ ಶಬ್ದಮಣಿದರ್ಪಣ – ಸಂ: ಎಲ್.ಬಸವರಾಜು,ಮೈಸೂರು ಪ್ರಿಟಿಂಗ್
ಮತ್ತು ಪಬ್ಲಿಷಿಂಗ್ ಹೌಸ್,
ಮೊದಲ ಮುದ್ರಣ

೩) ಪಂಪನ ಆದಿಪುರಾಣ – ಸಂ: ಎಲ್.ಬಸವರಾಜು,ಗೀತಾಬುಕ್ ಹೌಸ್, ಮೈಸೂರು.
ಮೊದಲ ಮುದ್ರಣ ೧೯೭೬

೪) ಪಂಪನ ಆದಿಪುರಾಣ ಕಥಾಮೃತ – ಎಲ್.ಬಸವರಾಜು,ಗೀತಾಬುಕ್ ಹೌಸ್,
ಮೈಸೂರು.
ಪ್ರಥಮ ಮುದ್ರಣ ೨೦೦೩

೫) ಪಂಪನ ಸಮಸ್ತ ಭಾರತ ಕಥಾಮೃತ – ಎಲ್.ಬಸವರಾಜುಕನ್ನಡ ಪುಸ್ತಕ
ಪ್ರಾಧಿಕಾರ,ಬೆಂಗಳೂರು.
ದ್ವಿತೀಯ ಮುದ್ರಣ ೨೦೦೧

೬) ಪಂಪನ ಸರಳ ಆದಿಪುರಾಣ –ಎಲ್.ಬಸವರಾಜು, ಅಭಿರುಚಿ ಪ್ರಕಾಶನ,ಮೈಸೂರು.
ಮೊದಲ ಮುದ್ರಣ ೨೦೦೨

೭) ಪಂಪ ಪೂರ್ವಯುಗ – ಎಲ್.ಬಸವರಾಜು, ಕರ್ನಾಟಕ ಸಾಹಿತ್ಯ
ಅಕಾಡೆಮಿ,ಬೆಂಗಳೂರು.ಪ್ರಥಮ ಮುದ್ರಣ,೧೯೯೬

೮) ರನ್ನನ ಸರಳ ಗದಾಯುದ್ಧ – ಎಲ್.ಬಸವರಾಜು, ಸಾ ರಾ ಎಂಟರ್
ಪ್ರೈಸಸ್,ಮೈಸೂರು,
ಮೊದಲ ಮುದ್ರಣ.೨೦೦೫

೯) ಸರಳ ಪಂಪಭಾರತ – ಎಲ್.ಬಸವರಾಜು,ಗೀತಾಬುಕ್ ಹೌಸ್,ಮೈಸೂರು,ಮೊದಲ
ಮುದ್ರಣ ೧೯೯೯

## ಪರಾಮರ್ಶನ ಸಾಹಿತ್ಯ


೧) ಕೇಶಿರಾಜ ಕವಿಯ ಶಬ್ದಮಣಿದರ್ಪಣ – ಸಂ: ಕಿಟ್ಟೆಲ್.

೨) ಕೇಶಿರಾಜ ಕವಿಯ ಶಬ್ದಮಣಿದರ್ಪಣ – ಸಂ: ಪಂಜೆ ಮಂಗೇಶರಾವ್.

೩) ಪಂಪ ಮಹಾಕವಿ ವಿರಚಿತ ಆದಿಪುರಾಣಂ – ಸಂ: ಪ್ರೊ.ಕೆ.ಜಿ. ಕುಂದಣಗಾರ ಮತ್ತು ಎ.ಪಿ.ಚೌಗಲೆ.

೪) ಪಂಪ ಕವಿ ವಿರಚಿತ ಆದಿಪುರಾಣಂ – ಸಂ: ಟಿ.ವಿ. ವೆಂಕಟಾಚಲಶಾಸ್ತ್ರೀ

೫) ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ – ಸಂ: ಕೆ.ವಿ.ಪುಟ್ಟಪ್ಪ

೬) ಪಂಪಭಾರತ ದೀಪಿಕೆ – ಡಿ.ಎಲ್.ನರಸಿಂಹಾಚಾರ್

೭) ಶಬ್ದಮಣಿದರ್ಪಣ – ಸಂ: ಡಿ.ಎಲ್ ನರಸಿಂಹಾಚಾರ್

೮) ಶಬ್ದಮಣಿದರ್ಪಣಂ – ಸಂ: ಎಂ.ವೆಂಕಟರಾವ್ ಮತ್ತು ಎಚ್.ಶೇಷಅಯ್ಯಂಗಾರ್

೯) ಶಬ್ದಮಣಿದರ್ಪಣದ ಪಾಠಾಂತರಗಳು ಮತ್ತು ಅನುಭವಾಮೃತವೂ ಹರಿಕಥಾಮೃತವೂ – ಡಿ.ಕೆ.ಭೀಮಸೇನಾರಾವ್

೧೦) ವಿಭೂತಿಪೂಜೆ – ಕುವೆಂಪು

೧೧) ಸಾಹಸಭೀಮವಿಜಯಂ – ಸಂ: ಪ್ರೊ.ಸಣ್ಣಯ್ಯ ಮತ್ತು ರಾಮೇಗೌಡ



ಎಲ್. ಬಸವರಾಜು

ಪಂಪಪ್ರಶಸ್ತಿ - 2000

# ಎಲ್. ಬಸವರಾಜು

## ಜೀವನ ಪಥ

ಜನನ : 7 ಅಕ್ಟೋಬರ್ 1919, ಕೋಲಾರ ಜಿಲ್ಲೆ ಗೌರಿಬಿದನೂರು ತಾಲ್ಲೂಕು ಇಡಗನೂರು. ತಂದೆ-ತಾಯಿ : ಲಿಂಗಪ್ಪ, ಈರಮ್ಮ.

ಶಿಕ್ಷಣ : ಇಡಗನೂರು, ಸಿದ್ಧಗಂಗೆಗಳಲ್ಲಿ ಶಾಲಾ ವಿದ್ಯಾಭ್ಯಾಸ. ಮೈಸೂರು ಮಹಾರಾಜಾ ಕಾಲೇಜಿನಿಂದ ಬಿ.ಎ. ಆನರ್ಸ್ ಮತ್ತು ಎಂ.ಎ.

ವೃತ್ತಿ : ದಾವಣಗೆರೆ ಡಿ.ಆರ್.ಎಂ. ಕಾಲೇಜಿನಲ್ಲಿ ಉಪನ್ಯಾಸಕರಾಗಿ ಅಧ್ಯಾಪಕ ವೃತ್ತಿ ಆರಂಭ ಮೈಸೂರು ವಿ.ವಿ. ಸ್ನಾತಕೋತ್ತರ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ನಿವೃತ್ತಿ.

ಮೈಸೂರು ವಿ.ವಿ.ದಿಂದ 1968ರಲ್ಲಿ 'ಅಲ್ಲಮನ ವಚನ ಚಂದ್ರಿಕೆ' ಮತ್ತು 'ಶಿವದಾಸ ಗೀತಾಂಜಲಿ' ಕೃತಿಗಳಿಗಾಗಿ ಡಿ.ಲಿಟ್ ಪದವಿ.

ವಚನಚಂದ್ರಿಕೆ ಕೃತಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪುರಸ್ಕಾರ, ಕನ್ನಡ ಸಾಹಿತ್ಯ ಪರಿಷತ್ತಿನ ಬೆಳ್ಳಿಹಬ್ಬದ ಪುರಸ್ಕಾರ, 1996 ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ.

ಸಂ.ಶಿ. ಭೂಸನೂರ ಮಠ ಪ್ರತಿಷ್ಠಾನ ಪ್ರಶಸ್ತಿ.

2000ರಲ್ಲಿ ಕರ್ನಾಟಕ ಸರ್ಕಾರದ ಪಂಪ ಪ್ರಶಸ್ತಿ

2001ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ 'ಬುದ್ಧ ಚರಿತ'ಕ್ಕೆ ಅನುವಾದ ಪ್ರಶಸ್ತಿ ಮೊದಲಾದ ಗೌರವ ಪ್ರಶಸ್ತಿಗಳು ಸಂದಿವೆ.

## ಸಾಹಿತ್ಯ ಪಥ

ಗ್ರಂಥ ಸಂಪಾದನೆ : ಪಂಪಕವಿಯ 'ಆದಿಪುರಾಣ', ಸರಳ ಪಂಪ ಭಾರತ, ಅಲ್ಲಮನ ವಚನಚಂದ್ರಿಕೆ, ಶಿವದಾಸ ಗೀತಾಂಜಲಿ, ಬಸವಣ್ಣನವರ ವಚನಗಳು, ಅಕ್ಕನ ವಚನಗಳು, ದೇವರ ದಾಸಿಮಯ್ಯ ವಚನಗಳು, ಅಲ್ಲಮ ಪ್ರಭು ವಚನಗಳು, ಸರ್ವಜ್ಞನ ವಚನಗಳು, ಶಿವಗಣ ಪ್ರಸಾದಿ ಮಹಾದೇವಯ್ಯಗಳ ಶೂನ್ಯಸಂಪಾದನೆ, ತೊರವೆ ರಾಮಾಯಣ ಸಂಗ್ರಹ, ಶೃಂಗಾರ ನಿದರ್ಶನ (ಚಿಕದೇವರಾಜಸಪ್ತಪದಿ), ಕನ್ನಡ ಛಂದಸ್ಸಂಪುಟ, ಶಬ್ದಮಣಿದರ್ಪಣಂ.

ಕಾವ್ಯ : ಠಾಣಾಂತರ, ಜಾಲಾರಿ

ಅನುವಾದ : ಬುದ್ಧಚರಿತ, ಸೌಂದರನಂದ, ಭಾಸನ ನಾಟಕಗಳ ಗದ್ಯಾನುವಾದ, ಗೂಳೂರು ಸಿದ್ಧವೀರಣಾರ್ಯನ ಶೂನ್ಯ ಸಂಪಾದನೆ (ಸರಳ ಗದ್ಯಾನುವಾದ), ನಿಜಗುಣಶಿವಯೋಗಿಗಳ, ರಾಘವಾಂಕನ ಸಿದ್ಧರಾಮ ಚಾರಿತ್ರ್ಯ, ಹರಿಶ್ಚಂದ್ರ ಕಾವ್ಯಗಳ ಸರಳ ಗದ್ಯಾನುವಾದಗಳು.

ಮಾಹಿತಿಕೃಪೆ : ಸಾಲುದೀಪಗಳು, ಕ.ಸಾ.ಅ.

ಎಲ್. ಬಸವರಾಜು ಅವರ ಒಟ್ಟು ಕೃತಿಸೂಚಿ.

೧. ಪಂಪ ಪೂರ್ವಯುಗ.
೨. ಆದಿಪುರಾಣ. (ಪರಿಷ್ಕರಣೆ)
೩. ಪಂಪನ ಆದಿಪುರಾಣ ಕಥಾಮೃತ.
೪. ಪಂಪನ ಸಮಸ್ತ ಭಾರತ ಕಥಾಮೃತ.
೫. ಸರಳ ಆದಿಪುರಾಣ.
೬. ಸರಳ ಪಂಪ ಭಾರತ.
೭. ಸರಳ ರನ್ನನ ಗದಾಯುದ್ಧ .
೮. ದೇವರ ದಾಸಿಮಯ್ಯನ ವಚನಗಳು .
೯. ವಚನ ಚಿಂತನ.
೧೦. ಅಲ್ಲಮನ ವಚನಗಳು.
೧೧. ಅಲ್ಲಮನ ವಚನ ಚಂದ್ರಿಕೆ.
೧೨. ಬಸವಣ್ಣನ ವಚನಗಳು.
೧೩. ಬಸವಣ್ಣಷಟ್ಸ್ಥಲ ವಚನಗಳು.
೧೪. ಬಸವ ವಚಾನಾಮೃತ.
(ಭಾಗ-1, ಭಾಗ-2)
೧೫. ಅಕ್ಕನ ವಚನಗಳು.
೧೬. ಶಿವದಾಸ ಗೀತಾಂಜಲಿ.
೧೭. ವೀರಶೈವ ತತ್ತ್ವ ಮತ್ತು
ಆಚರಣೆ.
೧೮. ಕಲ್ಯಾಣದ ಮಾಯಿದೇವನ
ಶಿವಾನುಭವಸೂತ್ರ.
೧೯. ಹರಿಹರನು ಕಂಡ ಜ್ಯೋತಿರ್ಲಿಂಗದ
ಮೂರು ಮುಖಗಳು.
೨೦. ಪ್ರಭುದೇವರ ಶೂನ್ಯ ಸಂಪಾದನೆ.
೨೧. ಸರಳ ಶೂನ್ಯ ಸಂಪಾದನೆ.
೨೨. ಶ್ರೀ ಶರಣ ಬಸವೇಶ್ವರ ಪುರಾಣ.
೨೩. ಮಹಾದಾಸೋಹ ಸೂತ್ರಗಳು.
೨೪. Dasohasutra of
poojyashri sharanabasappa appa.
೨೫. ಕಲ್ಬುರ್ಗಿಯ ಶರಣ ಬಸವ.
೨೬. ಶರಣ ಬಸವ ಸಂಪುಟ.
೨೭. ಮಹಾದೇವನ ಮಹಾಲಿಂಗೇಂದ್ರ ವಿಜಯ.
೨೮. ಸರ್ವಜ್ಞನ ವಚನಗಳು.
೨೯. ಸರ್ವಜ್ಞನ ವಚನಗಳು. (ಜನಪ್ರಿಯ ಆವೃತ್ತಿ)
೩೦. ಪರಮಾರ್ಥ.
೩೧. ನಿಜಗುಣ ಶಿವಯೋಗಿ. (ಕೈವಲ್ಯ ಪದ್ಧತಿ ಸುತ್ತ ಮುತ್ತ)
೩೨. ನಿಜಗುಣ ಶಿವಯೋಗಿ ತತ್ತ್ವದರ್ಶನ.
೩೩. ಸರಳ ಸಿದ್ಧರಾಮಚರಿತ್ರೆ.
೩೪. ಸರಳ ಹರಿಶ್ಚಂದ್ರಕಾವ್ಯ.
೩೫. ತೊರವೆರಾಮಾಯಣ ಸಂಗ್ರಹ.
೩೬. ತಿರುಮಲಾರ್ಯ ಮತ್ತು ಚಿಕ್ಕದೇವರಾಜ ಒಡೆಯರ್.
೩೭.ಶೃಂಗಾರ ನಿದರ್ಶನ.
೩೮. ಕನ್ನಡ ನಂದಸ್ಸಂಪುಟ.
೩೯. ಶಬ್ದಮಣಿದರ್ಪಣಂ.
೪೦. ಬುದ್ಧಚರಿತ್ರೆ.
೪೧. ಸೌಂದರನಂದ.
೪೨. ರಾಮಯಣನಾಟಕ ತ್ರಿವೇಣಿ.
೪೩. ಭಾಸನಭಾರತರೂಪಕ.
೪೪ ನಾಟಕಾಮೃತ ಬಿಂದುಗಳು.
೪೫. ರಾಣಾಂತರ.
೪೬. ಜಾಲಾರಿ.
೪೭. ಅಲ್ಲಮನು ಮೈಮೇಲೆ ಬಂದಾಗ.

